ಓಂ

ಭಗವದ್ವಿಷಯ ಗ್ರಂಥಮಾಲಾ

ಒಂದು

# ಈಶಾವಾಸ್ಯೋಪನಿಷತ್

(ಪ್ರತಿಪದಾರ್ಥ ಮತ್ತು ತಾತ್ಪರ್ಯಸಹಿತ)


ಗ್ರಂಥಕರ್ತರು :

ಶ್ರೀ ಉ ವೇ. ಪರಮಹಂಸೇತ್ಯಾದಿ ಶ್ರೀಯದುಗಿರಿ

ಯತಿರಾಜ ಸಂಪತ್ಕುಮಾರ ರಾಮಾನುಜಜೀಯರ್ ಸ್ವಾಮಿಗಳು



ಪ್ರಕಾಶಕರು :

ಶ್ರೀ ಯದುಗಿರಿ ಯತಿರಾಜಮಠ, ಸಂಸ್ಕೃತಿ ಪ್ರಚಾರ ಸಭಾ

ಮೇಲುಕೋಟೆ, (ತಿರುನಾರಾಯಣಪುರಂ)

೧೯೫೬ ಬೆಲೆ ಆರು ಆಣೆಗಳು

ಶ್ರೀಮತೇ ರಾಮಾನುಜಾಯ ನಮಃ



ಪರಮಹಂಸ ಪರಿವ್ರಾಜಕಾಚಾರ್ಯ-ಶ್ರೀ -ಉ

**ಶ್ರೀ ಯಮಗಿರಿ ಸಂಪತ್ಕುಮಾರ ರಾಮಾನುಜ ಜೀಯರ್ ಸ್ವಾಮಿಗಳು.**

# ಉಪೋದ್ಘಾತ

**ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ।**
**ಚಕ್ಷುರುನ್ಮೀಲಿತಂ ಯೇನ ತಸ್ಮೈ ಸದ್ಗುರವೇ ನಮಃ॥**

ಈಗ ನಮಗೆ ಜನ್ಮಗಳಲ್ಲಿ ಉತ್ತಮವಾದ ಮನುಷ್ಯಜನ್ಮ ಒಂದಿದೆ, ಅದರಿಂದ ನಾವು ಉತ್ತಮವಾದ ಫಲವನ್ನು ಪಡೆಯಲೇ ಬೇಕು. "ಪರಮಾತ್ಮನ ನಿಜಜ್ಞಾನ"ವನ್ನು ಪಡೆಯುವುದೇ ಈ ಉತ್ತಮವಾದ ಫಲ. ಆದರೆ ಈ ಲೋಕದ ಮನುಷ್ಯರಲ್ಲಿ ಅನೇಕರು ರಜೋಗುಣದಿಂದಲೂ ತಮೋಗುಣ ದಿಂದಲೂ ಕೂಡಿದವರಾಗಿ ಮೇಲಿನ ಉತ್ತಮವಾದ ಫಲವನ್ನು ಪಡೆಯದೆ ಬರಿಯ ಅಜ್ಞಾನವನ್ನೇ ಪಡೆದಿರುವರು ಅಂದರೆ ಅರ್ಥಕಾಮಜ್ಞಾನದಲ್ಲೇ ನಿರತರಾಗಿರುವರು. ಈ ಅಜ್ಞಾನದಿಂದ ತಾವು ಸ್ವತಂತ್ರರೆಂದೂ, ಎಲ್ಲಾ ವಸ್ತುಗಳೂ ತಮಗೇ ಸೇರಿದುವೆಂದೂ, ಅವುಗಳನ್ನೆಲ್ಲಾ ತಾವೇ ಅನುಭವಿಸ ತಕ್ಕವರೆಂದೂ ತಿಳಿದುಕೊಂಡು ಅರ್ಥಕಾಮಪುರುಷಾರ್ಥಗಳನ್ನು ಹೊಂದಲು ಅವಶ್ಯಕವಾದ ಕಾರ್ಯ್ಯಗಳಲ್ಲಿಯೇ ಯಾವಾಗಲೂ ಶ್ರದ್ಧೆಯನ್ನು ವಹಿಸಿರುವರು ಈ ಮನೋಭಾವನೆಗಳನ್ನು ಪಡೆದಿರುವವರೆಲ್ಲರೂ ಜನ್ನ ಮರಣಗಳೆಂಬ ಸಂಸಾರ ಚಕ್ರದಲ್ಲಿ ಸಿಕ್ಕಿಕೊಂಡು ಅಲ್ಪ ಸುಖಗಳೊಡನೆ ಕೂಡಿರುವ ದುಃಖ ಪರಂಪರೆಗಳನ್ನು ಅನುಭವಿಸುತ್ತಾ ಅತೃಪ್ತರಾಗಿರುವರು

ಹೀಗೆ ಅಜ್ಞಾನವನ್ನು ಪಡೆದಿರುವ ಮನುಷ್ಯರ ದುಃಖವನ್ನು ಹೋಗ ಲಾಡಿಸಿ ಅವರಿಗೆ ಶಾಶ್ವತವಾದ ಆನಂದವನ್ನು ಉಂಟುಮಾಡಿಕೊಡತಕ್ಕ ಉಪಾಯವಾವುದು? ಅನಾದಿಯಾದ, ದೋಷಗಳಿಲ್ಲದೇ ಇರುವ, ಭಗವಂತನು ಮೊದಲು ಚತುರ್ಮುಖ ಬ್ರಹ್ಮನಿಗೆ ಉಪದೇಶ ಮಾಡಿದ ವೇದಶಾಸ್ತ್ರಗಳಲ್ಲಿ ಬೋಧಿಸಿರುವ ತತ್ವಗಳನ್ನು ತಿಳಿದು ನಂಬಿ ಆಚರಿಸುವುದೇ ಈ ಉಪಾಯ ಎಂದರೇನು, ಮೋಕ್ಷವನ್ನು ಪಡೆಯಬೇಕು ಎಂಬ ಧ್ಯೇಯವನ್ನು ಪಡೆದಿರುವ ಮನುಷ್ಯನು ಜಡಜಗತ್ತು, ಜೀವ ಮತ್ತು ಈಶ್ವರ ಎಂಬ ತತ್ತ್ವತ್ರಯಗಳ

ನಿಜಸ್ವರೂಪ ಜ್ಞಾನವನ್ನು ಪಡೆಯಬೇಕು. ಅದಕ್ಕಾಗಿ ಅವನು ವೇದಶಾಸ್ತ್ರಗಳಲ್ಲಿರುವ ಮುಖ್ಯ ವಿಷಯಗಳನ್ನೆಲ್ಲಾ ಸದ್ಗುರುವಿನ ಮುಖದಿಂದ ತಿಳಿಯಬೇಕು ವೇದವು "ಸಂಹಿತೆ, ಬ್ರಾಹ್ಮಣ, ಉಪನಿಷತ್" ಎಂದು ಮೂರು ತೆರನಾಗಿರುವುದು, ಅವುಗಳೊಳಗೆ ಉಪನಿಷತ್ತುಗಳಲ್ಲಿ ಜಗತ್ತು, ಜೀವ, ಈಶ್ವರ ಇವರುಗಳ ನಿಜಸ್ವರೂಪವೂ, ಅವರಿಗಿರುವ ಪರಸ್ಪರ ಸಂಬಂಧವೂ ಮತ್ತು ಇವನ್ನು ತಿಳಿದುಕೊಂಡರೆ ಬರತಕ್ಕ ಫಲವೂ ತಿಳಿಸಲ್ಪಟ್ಟಿರುವುವು ಈ ಉಪನಿಷತ್ತುಗಳಲ್ಲಿ ಮುಖ್ಯವಾದುವು ಯಾವುವೆಂದರೆ—ಈಶ, ಕೇನ, ಕಠ, ಪ್ರಶ್ನ ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಬೃಹದಾರಣ್ಯಕ, ಛಾಂದೋಗ್ಯ ಎಂಬ ಹತ್ತು ಉಪನಿಷತ್ತುಗಳು ಅವುಗಳೊಳಗೆ "ಈಶಾವಾಸ್ಯೋಪನಿಷತ್" ಎಂಬುದು ಶುಕ್ಲ ಯಜುರ್ವೇದ ಸಂಹಿತೆಯ ಕೊನೆಯಲ್ಲಿರುವುದು

ಅನೇಕ ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿಯೂ ವಿಶದವಾಗಿಯೂ ಭೋಧಿಸಲ್ಪಟ್ಟಿರುವ ವಿಷಯಗಳನ್ನು ಹದಿನೆಂಟು ಮಂತ್ರಗಳಿಂದ ಮಾತ್ರ ಕೂಡಿರುವ ಈ ಚಿಕ್ಕ ಉಪನಿಷತ್ತಿನಲ್ಲಿ ಸಂಗ್ರಹವಾಗಿ ತಿಳಿಸಿವೆ ಆದುದರಿಂದ ಮೊದಲು ಉಪನಿಷತ್ತುಗಳ ಸಾರಾಂಶಗಳನ್ನು ಕ್ರೋಢೀಕರಿಸಿ ಅಮೇಲೆ ಈಶಾವ್ಯಾಸ ಉಪನಿಷತ್ತಿನ ಮಂತ್ರಗಳ ಸಾರವನ್ನು ಸಮನ್ವಯಮಾಡಿ ತಿಳಿಸುವೆವು "ಜಡವಾದ ಜಗತ್ತೂ ಸತ್ಯವಾದುದು, ಈ ಜಡವಾದ ಜಗತ್ತನ್ನು ಅನುಭವಿಸತಕ್ಕ ಜೀವನೂ ಸತ್ಯವಾದವನು ಮತ್ತು ಇವೆರಡಕ್ಕೂ ಒಡೆಯನಾದ ಈಶ್ವರನೂ ಸತ್ಯನಾದವನು. ಈ ಮೂರರಲ್ಲಿ ಜಡವಾದ ಜಗತ್ತು ಬದಲಾವಣೆಯನ್ನು ಹೊಂದುತ್ತಾ ಸ್ವರೂಪ ವಿಕಾರವುಳ್ಳದ್ದು, ಜೀವನು ತನ್ನ ಸ್ವಭಾವವಾದ ಜ್ಞಾನ ಸಂಕೋಚ ಹೊಂದತಕ್ಕವನು, ಆದುದರಿಂದ ಅವೆರಡೂ ದೋಷವುಳ್ಳವು. ಆದರೆ ಈಶ್ವರನಿಗೆ ಸ್ವರೂಪ ವಿಕಾರವೂ, ಸ್ವಭಾವ ವಿಕಾರವೂ ಇಲ್ಲದುದರಿಂದ ಅವನು ದೋಷವಿದೂರನು, ದಯಾವಾತ್ಸಲ್ಯಾದಿ ಕಲ್ಯಾಣಗುಣ ಪರಿಪೂರ್ಣನು" ಎಂದು ಉಪನಿಷತ್ತುಗಳಲ್ಲಿ ತತ್ವಗಳ ಸ್ವರೂಪಗಳು ತಿಳಿಸಲ್ಪಟ್ಟಿವೆ. ಜೀವ, ಜಗತ್ತುಗಳಿಗೆ ಈಶ್ವರನು ಸ್ವಾಮಿಯು, ಅವೆರಡೂ ಅವನ ಸ್ವತ್ತುಗಳು ಎಂಬ ಅವುಗಳಿಗಿರುವ ಪರಸ್ಪರ ಸಂಬಂಧವನ್ನು

ಕೆಳಗಿನ ಉಪನಿದ್ವಾಕ್ಯಗಳು ಸ್ಪಷ್ಟವಾಗಿ ತಿಳಿಸುತ್ತವೆ "ಪ್ರಧಾನ ಕ್ಷೇತ್ರಜ್ಞ ಪತಿಃ ಗುಣೇಶಃ" (ಪ್ರಧಾನವೆಂಬ ಹೆಸರುಳ್ಳ ಜಡ ಪ್ರಕೃತಿಗೂ ಕ್ಷೇತ್ರಜ್ಞನೆಂಬ ಜೀವನಿಗೂ ಕಲ್ಯಾಣ ಗುಣಗಳಿಂದ ಕೂಡಿದ ಭಗವಂತನು ಪತಿಯು.) "ಜ್ಞಾ ಜ್ಞೌ ಈಶ ನೀಶೋ" (ಭಗವಂತನು ಸರ್ವಜ್ಞನಾದ ಈಶನು, ಜೀವನು ಅಜ್ಞನಾದ ಪರತಂತ್ರನು) "ಕ್ಷರಾತ್ಮಾನೌ ಈಶತೇ ದೇವ ಏಕಃ" (ಕ್ಷರವೆಂಬ ಪ್ರಕೃತಿಯನ್ನೂ ಆತ್ಮನೆಂಬ ಜೀವನನ್ನೂ ಒಬ್ಬನಾದ ದೇವನು ಆಳುತ್ತಾನೆ) ಈ ಕ್ಷೇತ್ರಜ್ಞನಾದ ಜೀವನಿಗೆ ಈಶ್ವರನ ಜ್ಞಾನ ಉಂಟಾದರೆ, ಅವನ ಜ್ಞಾನಸಂಕೋಚ ಹೋಗಿ ಶುದ್ಧಿಯುಂಟಾಗುವುದು ಎಂಬ ಅಭಿಪ್ರಾಯವನ್ನು "ಕ್ಷೇತ್ರಜ್ಞಸ್ಯ ಈಶ್ವರಜ್ಞಾನಾತ್ ವಿಶುದ್ಧಿಃ ಪರಮಾಮತಾ" ಎಂಬ ಸ್ಮೃತಿವಾಕ್ಯವು ತಿಳಿಸುವುದು "ಸೋಹಂ" ಎಂಬ ಪದಕ್ಕೆ "ಆ ಪರಮ ಪುರುಷನು ನನಗೂ ಅಂತರಾತ್ಮನು" ಎಂಬ ಅರ್ಥವನ್ನು ಗ್ರಹಿಸಿದರೆ, ಆಗ ಚೇತನನಿಗೆ "ದಾಸೋಹಂ" ಎಂಬ ಭಾವನೆಯಿಂದಲೇ ಚೇತನನಿಗೆ ಉಜ್ಜೀವನವುಂಟಾಗುವುದೆಂಬುದನ್ನು ಕೆಳಗಿನ ವಾಕ್ಯವು ವಿವರಿಸುತ್ತದೆ.

"ಸ್ಯೋಜ್ಜೀವನೇಚ್ಛಾ ಯದಿತೇ ಸ್ವಸತ್ತಾಯಾಂ ಸ್ಪೃಹಾಯದಿ|
ಆತ್ಮದಾಸ್ಯಂಹರೇಃ ಸ್ವಾಮ್ಯಂ ಸ್ವಭಾವಂಚ ಸದಾಸ್ಮರ"||

(ನೀನು ಬದುಕಬೇಕೆಂಬ ಇಚ್ಛೆಯೂ, ನೀನು "ಸತ್" ಎನ್ನಿಸಿಕೊಳ್ಳ ತಕ್ಕ ಇಚ್ಛೆಯೂ ನಿನಗೆ ಇದ್ದರೆ, ಆತ್ಮನಲ್ಲಿರುವ ದಾಸತ್ವವೆಂಬ ಸ್ವಭಾವವನ್ನೂ ಪರಮಾತ್ಮನಲ್ಲಿರುವ ಸ್ವಾಮಿತ್ವವೆಂಬ ಸ್ವಭಾವವನ್ನೂ ಯಾವಾಗಲೂ ಸ್ಮರಿಸುತ್ತಿರು.)

ಪರಮಾತ್ಮನ ಸ್ವತ್ತನ್ನು ತನ್ನದೆಂದೂ, ತಾನೇ ಸ್ವತಂತ್ರನಾಗಿರುವುದರಿಂದ ಅವುಗಳನ್ನು ಅನುಭವಿಸಲು ಅಧಿಕಾರವುಳ್ಳವನೆಂದೂ ಉಂಟಾಗತಕ್ಕ ಅಜ್ಞಾನವನ್ನು ಮೇಲೆ ಕಾಣಿಸಿರುವ ಪ್ರತಿಭಾವನೆಯಿಂದ ಹೋಗಲಾಡಿಸಿಕೊಂಡರೆ ಅಜ್ಞಾನ ಮೂಲಕವಾದ ಸಂಸಾರ ಬಂಧವು ಹೋಗಿ ತನ್ನ ನಿಜಸ್ವರೂಪವು ಪ್ರಕಾಶಕ್ಕೆ ಬಂದು, ಸ್ವಾಮಿಯನ್ನು ಚೆನ್ನಾಗಿ ತಿಳಿದು, ತನ್ನ ದಾಸತ್ವಕ್ಕೆ ತಕ್ಕ ಕೈಂಕರ್ಯವನ್ನು ಸ್ವಾರ್ಥಗಂಧವಿಲ್ಲದೇ ಜೀವಾತ್ಮನು ತಾನು ಜೀವಿಸಿರುವ

ಪರ್ಯಂತ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ನಡೆಸುತ್ತಾನೆ ಈ ಜ್ಞಾನವನ್ನುಂಟು ಮಾಡತಕ್ಕದ್ದೇ ಉಪನಿಷತ್ತುಗಳ ಮುಖ್ಯ ತಾತ್ಪರ್ಯ

ಇನ್ನು ಈಶಾವಾಸ್ಯ ಉಪನಿಷತ್ತಿನ ಮಂತ್ರಗಳ ಸಾರಾಂಶಗಳನ್ನು ಸಮನ್ವಯ ಮಾಡಿ ಸಂಗ್ರಹವಾಗಿ ತಿಳಿಯೋಣ.

ಈ ಉಪನಿಷತ್ತಿನಲ್ಲಿ ೧೮ ಮಂತ್ರಗಳಿರುವುವು, ಮೊದಲನೆಯ ಮಂತ್ರವು ಜೀವ ಜಗತ್ತುಗಳಿಗೆ ಅಂತರ್ಯಾಮಿಯಾದ ಪರಮಾತ್ಮನು ಒಡೆಯನೆಂದೂ, ಜೀವ ಜಗತ್ತುಗಳು ಪರಮಾತ್ಮನ ಸ್ವತ್ತು ಎಂದೂ ತಿಳಿಯಪಡಿಸಿ, ಈ ಪರಮಾತ್ಮನ ಸ್ವತ್ತು ತನ್ನದು,, ಅದನ್ನು ಅನುಭವಿಸತಕ್ಕವನೂ ತಾನೇ ಎಂಬ ಅಜ್ಞಾನವನ್ನೂ ಹೋಗಲಾಡಿಸಿ, ಪರಮಾತ್ಮನ ಸ್ವತ್ತನ್ನು ಅವನಿಗೆ ಅರ್ಪಣೆಮಾಡಿ, ಅವುಗಳಲ್ಲಿ ವೈರಾಗ್ಯವನ್ನು ಪಡೆದು ನಿರತಿಶಯ ಭೋಗ್ಯನಾದ ಪರಮಾತ್ಮನನ್ನು ಅನುಭವಿಸಬೇಕೆಂದೂ ತಿಳಿಸುವುದು. ತತ್ವಗಳ ಸ್ವರೂಪವು ತಿಳಿದರೆ, ದೋಷಗಳಿಲ್ಲದೇ ಅತ್ಯಧಿಕ ಗುಣವುಳ್ಳದನ್ನು ಸ್ವೀಕರಿಸಬೇಕೆಂಬ ಬುದ್ಧಿಯುಂಟಾಗುವುದು ಮತ್ತು ಪ್ರಕೃತಿಯಲ್ಲಿಯೂ ಜೀವನಲ್ಲಿಯೂ ದೋಷಗಳಿರುವುದರಿಂದ, ಅವೆರಡನ್ನೂ ಬಿಟ್ಟು, ನಿರತಿಶಯಾನಂದರೂಪನೂ ಕಲ್ಯಾಣ ಗುಣಾಕರನೂ ಆದ ಪರಮಾತ್ಮನನ್ನು ಹೊಂದಬೇಕೆಂಬ ಇಚ್ಛೆಯುಂಟಾಗುವುದು. ಈ ಪರಮಾತ್ಮನನ್ನು ಹೊಂದುವುದಕ್ಕೆ ಉಪಾಯವು ಕರ್ಮಾಚರಣೆಯೊಡನೆ ಕೂಡಿದ ಪ್ರೀತಿರೂಪವಾದ ಆ ಭಗವಂತನ ನಿರಂತರ ಸ್ಮರಣೆಯೆಂಬ ಧ್ಯಾನ. ಈ ಧ್ಯಾನಕ್ಕೆ ಬ್ರಹ್ಮವಿದ್ಯೆಯೆಂದೂ ಹೆಸರು

ಈ ಧ್ಯಾನಕ್ಕೆ ಅಂಗವಾದ ಕರ್ಮವನ್ನು ಬದುಕಿರುವ ಪರ್ಯಂತ ನಡೆಸುತ್ತಲೇ ಇರಬೇಕೆಂದೂ, ಫಲದಲ್ಲಿ ಆಸೆಯಿಂದ ಮಾಡತಕ್ಕ ಕರ್ಮವು ಬಂಧವನ್ನುಂಟು ಮಾಡುತ್ತದೆಯೆಂದೂ, ಫಲದಲ್ಲಿ ಆಸೆ ಇಲ್ಲದೇ, ನನ್ನದೆಂಬ ಸಂಗವಿಲ್ಲದೇ, ನಾನೇ ಮಾಡುತ್ತೇನೆಂಬ ಅಹಂಕಾರವಿಲ್ಲದೇ, ಭಗವಂತನು ತನ್ನ ಸ್ವತ್ತಾದ ಜೀವನಿಂದ ತನ್ನ ಪ್ರಯೋಜನಕ್ಕಾಗಿ ತನ್ನ ಕೆಲಸ ಮಾಡಿಸುತ್ತಾನೆ ಎಂಬ ಬುದ್ಧಿಯೊಡನೆ ಮಾಡತಕ್ಕ ಕರ್ಮವು ಬಂಧವನ್ನುಂಟುಮಾಡುವುದಿಲ್ಲ

ವೆಂದೂ, ಮತ್ತು ಈ ರೀತಿಯಲ್ಲಿ ಮಾಡಿದ ಕರ್ಮಗಳು ಭಕ್ತಿಯನ್ನು ಹುಟ್ಟಿಸಿ ಅದನ್ನು ವೃದ್ಧಿಮಾಡಿ ಸಂಸಾರಬಂಧವನ್ನು ತಪ್ಪಿಸುವುದೆಂದೂ ಎರಡನೆಯ ಮಂತ್ರವು ತಿಳಿಸುವುದು. ಈ ಎರಡನೆಯ ಮಂತ್ರದ ಅಭಿಪ್ರಾಯವನ್ನೇ ಕೆಳಗಿನ ಶ್ರುತಿ ವಾಕ್ಯಗಳು ವಿಶದಪಡಿಸುತ್ತವೆ.

"ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ"

(ಕರ್ಮಗಳನ್ನು ಆಚರಿಸುತ್ತಿರುವ ಇವನು ಬ್ರಹ್ಮಜ್ಞಾನಿಗಳೊಳಗೆ ಶ್ರೇಷ್ಠನು)

"ಯಜ್ಞೇನದಾನೇನ ತಪಸಾ ನಾಶಕೇನ ಬ್ರಾಹ್ಮಣಾ ವಿವಿದಿಷಂತಿ"

ಯಜ್ಞದಾನ, ತಪಸ್ಸು, ಉಪವಾಸಗಳಿಂದ ಪರಬ್ರಹ್ಮನ ಸಮೀಪಕ್ಕೆ ಹೋಗತಕ್ಕವರು ಬ್ರಹ್ಮಜ್ಞಾನವನ್ನು ಪಡೆಯಲು ಅಪೇಕ್ಷಿಸುತ್ತಾರೆ.

"ಆ ಪ್ರಯಾಣಾತ್ ತತ್ರಾಪಿ ದೃಷ್ಟಂ—ವಿಹಿತತ್ವಾಚ್ಚಾಶ್ರಮ ಕರ್ಮಾಪಿ||"

(ಆತ್ಮನು ಈ ಶರೀರವನ್ನು ಬಿಟ್ಟು ಹೊರಡುವ ಪರ್ಯಂತ ಕರ್ಮವು ಕಾಣಲ್ಪಡುತ್ತದೆ.—ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿರುವುದರಿಂದ ಆಯಾ ಆಶ್ರಮಕರ್ಮಗಳು ಬ್ರಹ್ಮಜ್ಞಾನಿಗೆ ಅವಶ್ಯಕಗಳು)

ಎಂಬ ಬ್ರಹ್ಮ ಸೂತ್ರದಲ್ಲೂ,

"ಯಜ್ಞದಾನ ತಪಃ ಕರ್ಮನ ತ್ಯಾಜ್ಯಂ ಕಾರ್ಯಮೇ ವತತ್||"

(ಯಜ್ಞದಾನ ತಪಸ್ಸುಗಳು ಬಿಡಲ್ಪಡತಕ್ಕವುಗಳಲ್ಲ. ಆಚರಿಸಲ್ಪಡತಕ್ಕವುಗಳೆ.)

"ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ"

(ತಮ ತಮಗೆ ವಿಹಿತವಾದ ಕರ್ಮಗಳನ್ನು ಆಚರಿಸುತ್ತಾ ಮನುಷ್ಯನು ಮೋಕ್ಷಸಿದ್ಧಿಯನ್ನು ಪಡೆಯುವನು.)

"ಯಜ್ಞಾರ್ಥಾತ್ಕರ್ಮಣೋನ್ಯತ್ರ ಲೋಕೋಽಯಂ ಕರ್ಮ ಬಂಧನಃ"

(ಭಗವಂತನಿಗೋಸ್ಕರವಲ್ಲದ ಇತರ ಕರ್ಮಗಳು ಲೋಕದವರನ್ನು ಸಂಸಾರ

ಬಂದನಕ್ಕೆ ಸಿಕ್ಕಿಸುವುವು.)

ಎಂಬ ಗೀತಾಚಾರ್ಯನ ವಾಕ್ಯಗಳಲ್ಲಿಯೂ ಇದೇ ಅರ್ಥವು ತಿಳಿಸಲ್ಪಟ್ಟಿದೆ. ಈ ವಿಧವಾದ ಕರ್ಮಾಂಗಕವಾದ ವಿದ್ಯೆಯಲ್ಲಿ ಶೀಘ್ರವಾಗಿ ಪ್ರವೃತ್ತಿಯುಂಟಾಗುವುದಕ್ಕಾಗಿ ವಿದ್ಯೆ ಇಲ್ಲದವನನ್ನು ಮೂರನೇ ಮಂತ್ರದಲ್ಲಿ ನಿಂದಿಸಲಾಗಿರುತ್ತದೆ. ನಾಲ್ಕು ಮತ್ತು ಐದನೇ ಮಂತ್ರಗಳಲ್ಲಿ ಭಗವಂತನ ವಿಚಿತ್ರ ಶಕ್ತಿಯೋಗವು ಹೇಳಲ್ಪಟ್ಟಿರುವುದು.

ಆರನೇ ಮಂತ್ರದಿಂದ ಎಂಟನೇ ಮಂತ್ರದವರೆಗೆ ಬ್ರಹ್ಮಜ್ಞಾನಿಯಾದವನಿಗೆ.– ಎಲ್ಲಾ ವಸ್ತುಗಳೂ ಎಲ್ಲಾ ಆತ್ಮರೂ ಪರಮಾತ್ಮನಿಗೆ ಶರೀರದಂತೆ ವಿಧೇಯವಾಗಿರತಕ್ಕವುಗಳಾಗಿ ಅವನನ್ನು ಬಿಟ್ಟು ಬೇರೇ ಇರಲಾರದ ಸ್ವಭಾವವುಳ್ಳವುಗಳಾದುದರಿಂದ ಎಲ್ಲಾ ಆತ್ಮರಲ್ಲಿಯೂ ಒಂದು ಶರೀರದ ಅವಯವಗಳು ಪರಸ್ಪರ ಅನುಕೂಲವಾಗಿರುವಂತೆ ಪರಸ್ಪರ ಆನುಕೂಲ್ಯವುಳ್ಳವನಾಗಿ ಇರಬೇಕೆಂದು ಬ್ರಹ್ಮಜ್ಞಾನಿಯ ಲಕ್ಷಣವನ್ನು ಬೋಧಿಸಿದ ಮೋಕ್ಷೋಪಾಯವು ಬರಿಯ ಕರ್ಮಾಚರಣೆಯೂ ಅಲ್ಲ, ಬರಿಯ ಜ್ಞಾನವೂ ಅಲ್ಲ, ಒರಿಯ ಅಹಂಕಾರಾದಿಗಳ ನಿವೃತ್ತಿಯೂ ಅಲ್ಲ, ಬರಿಯ ಸಮಾಧಿಯೂ ಅಲ್ಲ, ಇವೆಲ್ಲವೂ ಒಟ್ಟಾಗಿ ಸೇರಿದುದಾಗಿರಬೇಕೆಂದು ಒಂಬತ್ತು, ಹತ್ತು, ಹನ್ನೊಂದು, ಹನ್ನೆರಡು, ಹದಿಮೂರು ಮತ್ತು ಹದಿನಾಲ್ಕನೇ ಮಂತ್ರಗಳು ತಿಳಿಯಪಡಿಸುತ್ತವ ಹದಿನೈದು ಹದಿನಾರನೇ ಮಂತ್ರಗಳು ಕರ್ಮಜ್ಞಾನ ವೈರಾಗ್ಯಗಳೆಂಬ ಅಂಗಗಳೊಡನೆ ಕೂಡಿದ ಭಕ್ತಿಯೋಗದಲ್ಲಿ ನಿರತರಾದವರು ಅನುಸಂಧಾನ ಮಾಡತಕ್ಕ ಮಂತ್ರಗಳನ್ನು ತಿಳಿಸುವುವು ಅದರಲ್ಲಿ ಹದಿನೈದನೆಯ ಮಂತ್ರವು ಸೂರ್ಯನಿಗೆ ಅಂತರಾತ್ಮನಾಗಿರತಕ್ಕ ಪರಮಾತ್ಮಧ್ಯಾನಕ್ಕೆ ಅಡ್ಡಿಯಾದುದನ್ನು ಹೋಗಲಾಡಿಸು ಎಂದು ಪ್ರಾರ್ಥನೆ ಮಾಡತಕ್ಕದ್ದನ್ನು ತಿಳಿಸುವುದು. ಹದಿನಾರನೆಯ ಮಂತ್ರವು ಭಗವಂತನ ದರ್ಶನವನ್ನೂ ಅದಕ್ಕೆ ಸಾಧನವನ್ನೂ ಪ್ರಾರ್ಥನೆ ಮಾಡುವ ರೀತಿಯನ್ನೂ ತಿಳಿಸುವುದು. ಈ ಮಂತ್ರದಲ್ಲ "ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ" ಎಂದು ಭಗವಂತನಿಗೆ ಶುಭಾಶ್ರಯವಾದ ದಿವ್ಯಶರೀರವಿರುವುದೆಂದು ಸ್ಪಷ್ಟವಾಗಿ ತಿಳಿಸಲ್ಪಟ್ಟಿದೆ. "ಶರೀರವಿಲ್ಲ,

ಗುಣವಿಲ್ಲ" ಎಂದು ಹೇಳುವ ವಾಕ್ಯಗಳಿಗೆ "ಪ್ರಾಕೃತ ಶರೀರವಿಲ್ಲ, ಸತ್ವರಜಸ್ತಮೋ ಗುಣಗಳಿಲ್ಲ" ಎಂದು ಅರ್ಥವು ಈ ಅರ್ಥವನ್ನು

"ನ ತಸ್ಯ ಪ್ರಾಕೃತಾ ಮೂರ್ತಿಃ ಮಾಂಸ ಮೇಧೋಸ್ಥಿ ಸಂಭವಾ"

(ಆ ಭಗವಂತನಿಗೆ ಮಾಂಸ, ಮೇಧಸ್ಸು, ಮೂಳೆಗಳಿಂದ ಕೂಡಿದ ಪ್ರಾಕೃತ ಶರೀರವಿಲ್ಲ.)

ಎಂಬ ಸ್ಮೃತಿವಾಕ್ಯವು ಸ್ಪಷ್ಟಪಡಿಸುತ್ತದೆ ಈ ಮಂತ್ರದಲ್ಲಿ "ಯೋ ಸೌಪುರುಷಃ ಸೋಽಹಮಸ್ಮಿ" ಎಂದು ತಿಳಿಸಿರುವುದು, ಈ ವಾಕ್ಯದ ಅಭಿಪ್ರಾಯವೇನು ? "ಅಹಂ" ಎಂಬ ಶಬ್ದವನ್ನು ಸಾಮಾನ್ಯ ಶಾಸ್ತ್ರವನ್ನು ಓದಿದವರು ದೇಹಕ್ಕಿಂತ ಬೇರೆಯಾದ ಜೀವಾತ್ಮನಲ್ಲಿ ಉಪಯೋಗಿಸುತ್ತಾರೆ. ವೇದಾಂತ ಶಾಸ್ತ್ರವನ್ನು ತಿಳಿದವರು ಜೀವಾತ್ಮನಿಗೂ ಆತ್ಮನಾದ ಪರಮಾತ್ಮನಲ್ಲಿ ಆ "ಅಹಂ" ಶಬ್ದವನ್ನು ಉಪಯೋಗಿಸುತ್ತಾರೆ. ಆದುದರಿಂದ "ಅಹಂ" ಎಂಬ ಇಲ್ಲಿರುವ ಶಬ್ದಕ್ಕೆ "ನನಗೂ ಅಂತರಾತ್ಮನು" ಎಂದು ಅರ್ಥ. ಆ ಪರಮಪುರುಷನು ನನಗೂ ಅಂತರಾತ್ಮನು ಎಂದು "ಸೋಽಹಂ" ಎಂಬುದರ ತಾತ್ಪರ್ಯವಾಗಿರುವುದು ಇದನ್ನೇ ವ್ಯಾಸರು ಮಹಾ ಭಾರತದಲ್ಲಿ

"ದ್ಯೌಸ್ಸ ಚಂದ್ರಾರ್ಕನಕ್ಷತ್ರಂ ಖಂದಿಶೋ ಭೂರ್ಮಹೋದಧಿಃ ।
ವಾಸು ದೇವಾತ್ಮಕಾನ್ಯಾಹುಃ ಕ್ಷೇತ್ರಂಕ್ಷೇತ್ರಜ್ಞಮೇವಚ॥"

(ಆಕಾಶ, ಭೂಮಿ, ಸಮುದ್ರ ಮೊದಲಾದ ಕ್ಷೇತ್ರವೆಂಬ ಶರೀರವೂ, ಕ್ಷೇತ್ರಜ್ಞವೆಂಬ ಜೀವರೂ ವಾಸುದೇವನೆಂಬ ಪರಮಾತ್ಮನನ್ನು ಆತ್ಮವಾಗಿ ಹೊಂದಿರತಕ್ಕವುಗಳು ಎಂದು ಹೇಳುವರು )

ಎಂಬ ವಾಕ್ಯದಿಂದ ಸ್ಪಷ್ಟಪಡಿಸುವರು. ಭಕ್ತಿಯೋಗವನ್ನಾರ್ಜಿಸಲು ಜ್ಞಾನಶಕ್ತ್ಯಾದಿಗಳಿಲ್ಲದ ಪರತಂತ್ರನಾದ ಆತ್ಮನಿಗೆ ತನ್ನನ್ನು ತಾನೇ ಕಾಪಾಡಿ ಕೊಳ್ಳತಕ್ಕದ್ದು ಸ್ವರೂಪಕ್ಕೆ ಅನನುರೂಪವಾದುದು ಎಂದು ಆತ್ಮಸ್ವರೂಪವನ್ನು

ಚೆನ್ನಾಗಿ ತಿಳಿದಿರತಕ್ಕವನಿಂದ ಭಗವಂತನೇ ಉಪಾಯವು ಎಂಬ ದೃಢನಿಶ್ಚಯ ರೂಪವಾದ ಶರಣಾಗತಿಯು ಮಾಡಲ್ಪಡತಕ್ಕದ್ದು, ಈ ಶರಣಾಗತಿನಿಷ್ಠನು ಅನುಸಂಧಾನ ಮಾಡತಕ್ಕ ರೀತಿಯನ್ನು ಹದಿನೇಳನೆಯ ಮಂತ್ರವು ತಿಳಿಸುವುದು ಬ್ರಹ್ಮಧ್ಯಾನ ಮಾಡಿದವನೂ, ಶರಣಾಗತಿ ಮಾಡಿದವನೂ, ಈ ಶರೀರವನ್ನು ಬಿಟ್ಟನಂತರ ಅರ್ಚಿರಾದಿ ಮಾರ್ಗದಲ್ಲಿ ಹೋಗಿ ಪರಬ್ರಹ್ಮನನ್ನು ಹೊಂದಿ ತನ್ನ ಸ್ವರೂಪ ಪ್ರಕಾಶವನ್ನು ಪಡೆದು ಪರಬ್ರಹ್ಮನನ್ನೂ ಅವನ ಕಲ್ಯಾಣ ಗುಣಗಳನ್ನೂ ಅನುಭವಿಸಿ ಪ್ರೀತಿಯೊಡನೆ ಸಾಮಗಾನ ಮಾಡುತ್ತಾ ಕೈಂಕರ್ಯ ಮಾಡುತ್ತಾನೆ ಬ್ರಹ್ಮಧ್ಯಾನಿಗೆ ಪ್ರಾರಬ್ಧ ಕರ್ಮ ನಾಶಾನಂತರ ಅನೇಕ ಜನ್ಮಗಳು ಕಳೆದಮೇಲೆ ಈ ವಿಧವಾದ ಮೋಕ್ಷಲಭಿಸುವುದು, ಶರಣಾಗತನಿಗೆ ಈಗ ಬಂದಿರುವ ಶರೀರ ನಾಶವಾದ ಕೂಡಲೇ ಈ ಮೋಕ್ಷ ಲಭಿಸುವುದು ಆದುದರಿಂದ ತನ್ನ ಪುಣ್ಯಪಾಪಗಳನ್ನು ನಿಶ್ಶೇಷವಾಗಿ ಹೋಗಲಾಡಿಸಿ ಅರ್ಚಿರಾದಿ ಮಾರ್ಗದ ಮೂಲಕ ಪರಮಪದವನ್ನು ಸೇರಿಸಿ ನಿರಂತರ ಭಗವಂತನ ಅನುಭವವನ್ನೂ ಕೈಂಕರ್ಯವನ್ನೂ ಉಂಟುಮಾಡಬೇಕೆಂದು ಹೇಳುವ ಹದಿನೆಂಟನೆಯ ಮಂತ್ರವು ಪ್ರಾರ್ಥನೆಯರೂಪದಲ್ಲಿದೆ. ಹೀಗೆ ತತ್ವಗಳ ಸ್ವರೂಪವನ್ನು ತಿಳಿದು ಹಿತವನ್ನು ಆಚರಿಸಿ ಪುರುಷಾರ್ಥವನ್ನು ಪಡೆಯತಕ್ಕ ರೀತಿಯು ಈ ಉಪನಿಷತ್ತಿನಲ್ಲಿ ತಿಳಿಸಲ್ಪಟ್ಟಿರುವುದು

ಈ ಉಪನಿಷತ್ತಿನ ಗ್ರಂಥಗಳನ್ನು ಓದಿ ತಿಳಿದುಕೊಳ್ಳಲು ಶಕ್ತಿಯಿಲ್ಲದವರಿಗೆ ಮಂತ್ರಗಳ ಪ್ರತಿಪದಾರ್ಥಗಳನ್ನೂ ಮತ್ತು ಸಂಗ್ರಹಾರ್ಥವನ್ನೂ ಕನ್ನಡ ಭಾಷೆಯಲ್ಲಿ ಬರೆದಿದ್ದೇವೆ.

**ಶ್ರೀ ಯತಿರಾಜ ಸಂಪತ್ಕುಮಾರ ರಾಮಾನುಜ ಜೀಯರ್**

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

# ಈ ಶಾ ವಾ ಸ್ಯೋ ೕ ಪ ನಿ ಷ ತ್

**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ ॥೧॥**

ಜಗತ್ಯಾಂ—ಎಲ್ಲಾ ಲೋಕದಲ್ಲಿಯೂ, ಜಗತ್-ಬೇರೆ ಅವಸ್ಥೆಯನ್ನು ಹೊಂದತಕ್ಕ, ಯತ್ಕಿಂಚ—ಒಂದೂ ಉಳಿಯದೇ, ಇದಂ ಸರ್ವಂ—ಈ ಚೇತನಾಚೇತನಗಳೆಲ್ಲವೂ, ಈಶಾ—ಒಡೆಯನಾದ ಪರಮಾತ್ಮನಿಂದ, ವಾಸ್ಯಂ—ವ್ಯಾಪಿಸಲ್ಪಟ್ಟಿದೆ ತ್ಯಕ್ತೇನ ತೇನ—ಜಗತ್ತಿನಲ್ಲಿ ತ್ಯಾಗ ಬುದ್ಧಿಯೊಡನೆ ಕೂಡಿ, ಭುಂಜೀಥಾಃ—(ಧರ್ಮದಿಂದ ಕೂಡಿದ ಪರ ಮಾತ್ಮನ ಶೇಷವಸ್ತುಗಳನ್ನು ಅಥವಾ ಪರಮಾತ್ಮನನ್ನು) ಅನುಭವಿಸು ಕಸ್ಯಸ್ವಿತ್ ಧನಂ – ಇನ್ನೊಬ್ಬರ ವಸ್ತುವನ್ನು, ಮಾ ಗೃಧಃ—ಆಸೆಪಡ ಬೇಡ

ಪರಮಾತ್ಮನು ಜಗತ್ತಿಗೆಲ್ಲಾ, ಎಂದರೆ ಚೇತನಾಚೇತನ ವಸ್ತುಗಳಿಗೆಲ್ಲಾ, ಸ್ವಾಮಿಯು ಜಗತ್ತಿನಲ್ಲಿರತಕ್ಕ ಎಲ್ಲಾ ಪದಾರ್ಥಗಳೂ ಅವನ ಸ್ವತ್ತು ಆದುದರಿಂದ, ಅವನ ಸ್ವತ್ತನ್ನು ಅಪಹರಿಸದೇ ಅವನಿಗೆ ಅರ್ಪಣೆಮಾಡಿ ಜಗತ್ತಿನಲ್ಲಿರುವ ಪದಾರ್ಥಗಳಲ್ಲಿ, ಭಗವಂತನ ಕೈಂಕರ್ಯ ಮಾಡತಕ್ಕ ಶರೀರಧಾರಣೆಗೆ ಬೇಕಾದಷ್ಟನ್ನು ಮಾತ್ರ ಅನುಭವಿಸಬೇಕು "ನಾನೇ ಈಶ್ವರನು ನಾನೇ ಈ ಜಗತ್ತಿನಲ್ಲಿರುವ ಪದಾರ್ಥಗಳನ್ನೆಲ್ಲಾ ಅನುಭವಿಸತಕ್ಕವನು" ಎಂಬ ಭ್ರಮೆಯನ್ನು ಬಿಡಬೇಕು ಎಂದು ಬ್ರಹ್ಮಜ್ಞಾನಿಯಸ್ವರೂಪವನ್ನೂ, ನಡತೆಯನ್ನೂ, ಈಮಂತ್ರವು

ತಿಳಿಯುನಡಿಸುವುದು ಅಥವಾ ಈ ಪ್ರಪಂಚದಲ್ಲಿರುವ ಜಡವಸ್ತುಗಳು ವಿಕಾರವನ್ನು ಹೊಂದುತ್ತವೆ ಚೇತನರು ಜ್ಞಾನಸಂಕೋಚ ಬಿಟ್ಟು ವಿಕಾಸ ಹೊಂದತಕ್ಕ ಸ್ವಭಾವ ವ್ಯತ್ಯಾಸವನ್ನು ಹೊಂದುತ್ತಾರೆ ಆದುದರಿಂದ ಇವೆರಡರಲ್ಲಿಯೂ ಭೋಗ್ಯತಾಬುದ್ಧಿ ಮಾಡದೇ ಸ್ವರೂಪ ವಿಕಾರವೂ ಸ್ವಭಾವವಿಕಾರವೂ ಇಲ್ಲದ ಪರಮಾತ್ಮನಲ್ಲಿಯೇ ಭೋಗ್ಯತಾ ಬುದ್ಧಿಯನ್ನು ಇಡಬೇಕು ಎಂದು ಉಪದೇಶಿಸುವುದು

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥೨॥**

ಶತಂಸಮಾಃ–ನೂರು ವರ್ಷಕಾಲ, ಕರ್ಮಾಣಿ— ನಿತ್ಯನೈಮಿತ್ತಿಕ ಕರ್ಮಗಳನ್ನು, ಕುರ್ವನ್ ಏವ— ಮಾಡುತ್ತಲೇ, ಇಹ–ಈಲೋಕದಲ್ಲಿ, ಜಿಜೀವಿಷೇತ್—ಬದಕಲು ಇಷ್ಟಪಡಬೇಕು ತ್ವಯಿ—ನಿನ್ನ ವಿಷಯ ದಲ್ಲಿ, ಏವಂ—ಕರ್ಮಗಳು ಆಚರಿಸಲ್ಪಡತಕ್ಕವೇ, ಇತಃ ಅನ್ಯಥಾ—ಇದ ಕ್ಕಿಂತ ಬೇರೆರೀತಿಯು, ನ ಅಸ್ತಿ—ಇಲ್ಲ ನರೇ—ಬ್ರಹ್ಮಜ್ಞಾನಿಯಾದ ಮನುಷ್ಯನಲ್ಲಿ, ಕರ್ಮ—ಕರ್ಮವು, ನ ಲಿಪ್ಯತೇ—ಸಂಸಾರ ಸಂಬಂಧ ವನ್ನುಂಟುಮಾಡುವುದಿಲ್ಲ

## ತಾತ್ಪರ್ಯ

ಈ ಮಂತ್ರದಲ್ಲಿ ಬ್ರಹ್ಮಜ್ಞಾನಿಯಾದವನು, ಬಹ್ಮವಿದ್ಯೆಗೆ ಅಂಗ ವಾಗಿ ಫಲದಲ್ಲಿ ಆಸೆ, ಕರ್ಮದಲ್ಲಿ ನನ್ನದೆಂಬ ಸಂಗ, ಈ ಕರ್ಮವನ್ನು ನಾನು ಮಾಡತಕ್ಕವನು, ಎಂಬ ಭಾವನೆಗಳನ್ನು ಬಿಟ್ಟು ಭಗವಂತನು ತನ್ನವನಾದ ನನ್ನಿಂದ ತನ್ನ ಪ್ರಯೋಜನಕ್ಕಾಗಿ ತನ್ನ ಕೆಲಸಗಳನ್ನು ಮಾಡಿಸುತ್ತಾನೆ, ಎಂದು ತಿಳಿದು ನೂರು ವರ್ಷಗಳಕಾಲ ಬದುಕಿದರೂ ಶಾಸ್ತ್ರದಲ್ಲಿ ಆಯಾ ಅಧಿಕಾರಿಗಳಿಗೆ ಗೊತ್ತುಮಾಡಿರುವ ಕರ್ಮವನ್ನು ಮಾಡುತ್ತಲೇ ಇರಬೇಕು. ಈ ವಿಧವಾದ [illegible]ಕರ್ಮವನ್ನು ಬಿಡಲೇಕೂಡದು ಎಂದು ತಿಳಿಸುವುದು

**ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾ ವೃತಾಃ ।**
**ತಾಂ ಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ॥೩॥**

ಆತ್ಮಹನಃ—ತನ್ನ ಆತ್ಮನನ್ನು, ಇದ್ದರೂ ಇಲ್ಲದವನಂತೆ ಮಾಡತಕ್ಕ (ಬ್ರಹ್ಮಜ್ಞಾನವಿಲ್ಲದಿರುವ), ಯೇ ಕೇ ಚ ಜನಾಃ—ಯಾವಜನರಿದ್ದಾರೋ, ತೇ—ಅವರು, ಪ್ರೇತ್ಯ—ಸತ್ತಬಳಿಕ, ಅಂಧೇನ ತಮಸಾ ವೃತಾಃ—ದಟ್ಟವಾದ ಕತ್ತಲೆಯಿಂದ ವ್ಯಾಪಿಸಲ್ಪಟ್ಟ, ಅಸುರ್ಯಾನಾಮ ತೇ ಲೋಕಾಃ-ರಾಕ್ಷಸರಿಗೆ ಭೋಗ್ಯವಾದ ಯಾವ ಪ್ರಸಿದ್ಧಲೋಕಗಳುಂಟೋ, ತಾ ಅಭಿಗಚ್ಛಂತಿ-ಅವುಗಳನ್ನು ಸೇರುವರು

## ತಾತ್ಪರ್ಯ

ಬ್ರಹ್ಮಜ್ಞಾನವನ್ನು ಪಡೆಯದೇ ಇರುವವರು, ರಾಕ್ಷಸರಿಗೆ ಯೋಗ್ಯವಾದ ಕಗ್ಗತ್ತಲೆಯಿಂದ ಕೂಡಿರುವ ಸ್ಥಳಕ್ಕೆ ಹೋಗುವರು

**ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ**
**ಆಪ್ನುವರ್ನ ಪೂರ್ವಮರ್ಷತ್ ।**
**ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ನಪೋ**
**ಮಾತರಿಶ್ವಾದಧಾತಿ ॥೪॥**

ಅನೇಜತ್-ಚಲಿಸದೇ ಇರುವ, ಏಕಂ-ತನಗೆ ಸಮ ಮತ್ತು ಅಧಿಕವಾದದ್ದು ಇಲ್ಲದ, ಮನಸಃ ಜವೀಯಃ—ಮನಸ್ಸಿಗಿಂತ ವೇಗವುಳ್ಳಂಥಾ, ಪೂರ್ವಂಅರ್ಷತ್-ಮೊದಲೇ ತಮ್ಮನ್ನು ಹೊಂದಿರತಕ್ಕ, ಏನತ್-ಈ ಪರಬ್ರಹ್ಮನನ್ನು, ದೇವಾಃ-ದೇವತೆಗಳು, ನ ಆಪ್ನುವರ್-ಹೊಂದಲಿಲ್ಲ ತಿಷ್ಠತ್ ತತ್-ಎಲ್ಲಾಕಡೆಯೂ ಇರತಕ್ಕ ಆ ಪರಬ್ರಹ್ಮನು, ಧಾವತಃ ಅನ್ಯಾ-ಓಡುತ್ತಿರುವ ಬೇರೆ ವಸ್ತುವನ್ನು, ಅತ್ಯೇತಿ-ಮೀರಿಸುತ್ತದೆ ತಸ್ಮಿ—ಪರಮಾತ್ಮನಲ್ಲಿರತಕ್ಕ, ಮಾತರಿಶ್ವಾ-ವಾಯುವು, ಅಪಃ-ನೀರು ಮೇಘ ಮೊದಲಾದುವನ್ನು, ದಧಾತಿ—ಧರಿಸುತ್ತದೆ

## ಈ ನಾಲ್ಕನೆಯ ಮಂತ್ರವೂ ಐದನೆಯ ಮಂತ್ರವೂ ಸಹ ಪರಮಾತ್ಮನ ಸ್ವರೂಪವನ್ನೂ, ವಿಚಿತ್ರ ಶಕ್ತಿಯನ್ನೂ ತಿಳಿಸುವುವು

ಪರಮಾತ್ಮನ ಸ್ವರೂಪವು ವಿಭುವು ಎಂದರೆ ಎಲ್ಲಾ ಕಡೆಯಲ್ಲೂ ವ್ಯಾಪಿಸಿರುವುದು ಆದುದರಿಂದ, ಆತನು ಚಲನೆ ಇಲ್ಲದಿದ್ದರೂ ಮನಸ್ಸಿಗಿಂತ ವೇಗವುಳ್ಳವನು ತನ್ನೊಡನೆ ಮೊದಲೇ ಸೇರಿಕೊಂಡಿರತಕ್ಕ ಆತನನ್ನು ಜ್ಞಾನ ಸಂಕೋಚವುಳ್ಳ ದೇವತೆಗಳು ಇದುವರೆಗೂ ಹೊಂದಲಿಲ್ಲ ಎಲ್ಲಾ ದೇಶದಲ್ಲಿಯೂ ವ್ಯಾಪಿಸಿರುವುದರಿಂದ ಗರುಡ ಮೊದಲಾದವರು ಎಷ್ಟುದೂರ ಹೋದರೂ ಅದಕ್ಕಿಂತ ಆಚೆ ಇದ್ದು ಅವುಗಳನ್ನು ಮೀರಿಸಿರುವನು ಆ ಪರಮಾತ್ಮನಿಂದ ಧರಿಸಲ್ಪಟ್ಟ ಕಾಠಿಣ್ಯವಿಲ್ಲದ ವಾಯುವು, ಭಾರವುಳ್ಳ ನೀರು, ಮೇಘ, ಗ್ರಹಗಳು, ನಕ್ಷತ್ರಗಳು ಮೊದಲಾದುವನ್ನು ಧರಿಸುವುದು

**ತದೇಜತಿ ತನ್ನೈಜತಿ ತದ್ದೂರೇ ತದ್ವದಂತಿಕೇ ।**
**ತದಂತರಸ್ಯ ಸರ್ವಸ್ಯ ತದುಸರ್ವಸ್ಯಾಸ್ಯ ಬಾಹ್ಯತಃ ॥೫॥**

ತತ್—ಆ ಪರಬ್ರಹ್ಮನು, ಏಜತಿ—ಚಲಿಸುತ್ತದೆಯೋ ಎನ್ನುವಂತೆ ವೇಗವುಳ್ಳದ್ದಾಗಿದೆ ತತ್—ಆ ಪರಬ್ರಹ್ಮನು, ನ ಏಜತಿ—ನಿಜವಾಗಿ ಚಲಿಸುವುದಿಲ್ಲ ತತ್—ಆ ಪರಬ್ರಹ್ಮನು, ದೂರೇ—ರಾಕ್ಷಸ ಸ್ವಭಾವದವರಿಗೆ ದೂರದಲ್ಲಿರುತ್ತಾನೆ ತದ್ವತ್—ಅದರ ಹಾಗೆಯೇ, ಅಂತಿಕೇ—ದೇವತೆಗಳ ಸ್ವಭಾವದವರಿಗೆ ಹತ್ತಿರದಲ್ಲಿರುತ್ತಾನೆ. ತತ್-ಆ ಪರಬ್ರಹ್ಮನು, ಅಸ್ಯ ಸರ್ವಸ್ಯ—ಎಲ್ಲಾ ವಸ್ತುಗಳಿಗೂ, ಅಂತಃ—ಒಳಗೆ ಇರುತ್ತದೆ ತದು—ಆ ಪರಬ್ರಹ್ಮವೇ, ಅಸ್ಯ ಸರ್ವಸ್ಯ-ಈ ಎಲ್ಲಾ ವಸ್ತುಗಳಿಗೂ, ಬಾಹ್ಯತಃ-ಹೊರಗಡೆಯಲ್ಲಿಯೂ (ಇರುತ್ತದೆ)

### ತಾತ್ಪರ್ಯ

ಪರಬ್ರಹ್ಮನು ವಿಭುವಾಗಿ ಎಲ್ಲಾ ಕಡೆಯಲ್ಲಿಯೂ ಇರುವುದರಿಂದ ವೇಗವುಳ್ಳ ವಸ್ತುವಿನಂತೆ ಕಾಣಿಸುತ್ತಾನೆ ಆದರೆ ಚಲಿಸುವುದಿಲ್ಲ

ತಮೋಗುಣವು ಹೆಚ್ಚಾಗಿರುವವರಿಗೆ ಗೋಚರನಾಗುವುದಿಲ್ಲ ಸತ್ವ ಗುಣವು ಅಧಿಕವಾಗಿರುವವರಿಗೆ ಹೃದಯದಲ್ಲಿಯೇ ಗೋಚರನಾಗುತ್ತಾನೆ ಎಲ್ಲಾ ವಸ್ತುಗಳ ಹೊರಗೂ ಇದ್ದಾನೆ ಒಳಗೂ ಇದ್ದಾನೆ

**ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥೬॥**

ಯಸ್ತು-ಯಾವ ಬ್ರಹ್ಮಜ್ಞಾನಿಯಾದರೋ, ಸರ್ವಾಣಿ ಭೂತಾನಿ-ಎಲ್ಲಾ ವಸ್ತುಗಳನ್ನೂ, ಆತ್ಮನಿ ಏವ ಅನುಪಶ್ಯತಿ—ಪರಮಾತ್ಮನಲ್ಲಿಯೇ ಇರುವಂಥಾದ್ದನ್ನಾಗಿ ತಿಳಿಯುತ್ತಾನೆಯೋ, ಸರ್ವಭೂತೇಷು ಚ-ಎಲ್ಲಾ ವಸ್ತುಗಳಲ್ಲಿಯೂ, ಆತ್ಮಾನಂ-ಪರಮಾತ್ಮನನ್ನು (ವ್ಯಾಪ್ತಿಯ ಮೂಲಕ ಇರುವಂಥಾವನನ್ನಾಗಿ ತಿಳಿಯುತ್ತಾನೆಯೋ) (ಸಃ) - ಆ ಬ್ರಹ್ಮಜ್ಞಾನಿಯು, ತತಃ—ಎಲ್ಲಾವಸ್ತುಗಳ ವಿಷಯದಲ್ಲೂ, ನ ವಿಜುಗುಪ್ಸತೇ-ಅಸಹ್ಯಪಡುವುದಿಲ್ಲ

**೬ ನೇ ಮಂತ್ರದಿಂದ ೭ನೇ ಮಂತ್ರದವರಿಗೆ ಬ್ರಹ್ಮಜ್ಞಾನಿಯ ಲಕ್ಷಣಗಳು ತಿಳಿಸಲ್ಪಡುತ್ತವೆ**

ಸಕಲ ವಸ್ತುಗಳೂ ಪರಮಾತ್ಮನಲ್ಲಿವೆ ಎಂದರೆ ಅವುಗಳಿಗೆ ಪರಮಾತ್ಮನೇ ಆಧಾರನೂ ಎಂದೂ, ಪರಮಾತ್ಮನು ಎಲ್ಲಾ ವಸ್ತುಗಳಲ್ಲಿಯೂ ಆತ್ಮನಾಗಿ ವ್ಯಾಪಿಸಿರುತ್ತಾನೆ, ಎಂದರೆ ಎಲ್ಲಾ ವಸ್ತುಗಳೂ ಬ್ರಹ್ಮನನ್ನೇ ಆತ್ಮನನ್ನಾಗಿ ಉಳ್ಳವು ಎಂದೂ ತಿಳಿದುಕೊಳ್ಳತಕ್ಕ ಬ್ರಹ್ಮಜ್ಞಾನಿಯು ಯಾವ ವಸ್ತುಗಳನ್ನು ಕಂಡರೂ ಅಸಹ್ಯಪಡುವುದಿಲ್ಲ

**ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ವಿಜಾನತಃ ।**
**ತತ್ರ ಕೋ ಮೋಹಃ ಕಶ್ಶೋಕಃ ಏಕತ್ವಮನುಪಶ್ಯತಃ ॥೭॥**

ಯಸ್ಮಿನ್—ಯಾವ ಧ್ಯಾನ ಕಾಲದಲ್ಲಿ, ವಿಜಾನತಃ—ಸ್ವತಂತ್ರನಾದ ಪರಮಾತ್ಮನಿಗೂ, ಪರತಂತ್ರಗಳಾದ ಜೀವಾತ್ಮ ಜಡವಸ್ತುಗಳಿಗೂ

ಭೇದವನ್ನು ತಿಳಿದಿರತಕ್ಕ, ಏಕತ್ವಂ ಅನುಪಶ್ಯತಃ—ಸ್ವತಂತ್ರನಾದ ಪರಮಾತ್ಮನಿಗೂ ಪರತಂತ್ರಗಳಾದ ಜೀವಾತ್ಮ ಜಡವಸ್ತುಗಳಿಗೂ ಅಪೃಥಕ್ ಸಿದ್ಧಿ ಸಂಬಂಧವುಳ್ಳದ್ದರಿಂದ, ಅವನ್ನು "ಒಂದು" ಎಂದು ಧ್ಯಾನಿಸತಕ್ಕವನಿಗೆ, ಸರ್ವಾಣಿ ಭೂತಾನಿ—ಎಲ್ಲಾ ವಸ್ತುಗಳೂ, ಆತ್ಮ ಏವ ಅಭೂತ್—ಶರೀರಿಯಾದ ಪರಮಾತ್ಮನೇ ಆಗಿರುತ್ತಾನೆ. ತತ್ರ—ಆ ಧ್ಯಾನ ಕಾಲದಲ್ಲಿ, ಮೋಹಃ ಕಃ—ಆತ್ಮನು ಸ್ವತಂತ್ರನು ಎಂಬ ಭ್ರಮೆ ಎಲ್ಲಿಂದ ಬಂತು? ಶೋಕಃ ಕಃ—ಮಮತೆ ಇಲ್ಲದುದರಿಂದ ಶೋಕವೆಲ್ಲಿ ಬಂತು?

## ತಾತ್ಪರ್ಯ

ಎಲ್ಲಾ ವಸ್ತುಗಳಲ್ಲಿಯೂ ಪರಮಾತ್ಮನು ಇದ್ದಾನೆ ಎಂದೂ, ಎಲ್ಲಾ ವಸ್ತುಗಳಿಗೂ ಪರಮಾತ್ಮನು ಆಧಾರನೆಂದೂ ಹೇಳಿದುದರಿಂದ, ಪರಮಾತ್ಮನು ಆ ವಸ್ತುಗಳಿಗಿಂತ ಬೇರೆ ಎಂದು ತಿಳಿದು ಬಂದರೂ, ಆ ವಸ್ತುಗಳು ಪರಮಾತ್ಮನಿಗೆ ವಿಶೇಷಣವಾಗಿ ಪರಮಾತ್ಮನನ್ನು ಬಿಟ್ಟು ಬೇರೆ ಇರತಕ್ಕ ಸ್ವಭಾವವುಳ್ಳವುಗಳಲ್ಲ, ಪರಮಾತ್ಮನೊಡನೆಯೇ ಇರತಕ್ಕ ಸ್ವಭಾವವುಳ್ಳವು, ಆದುದರಿಂದ, ಇವುಗಳಿಗೂ ಪರಮಾತ್ಮನಿಗೂ ಅಪೃಥಕ್ ಸಿದ್ಧ ಸಂಬಂಧವಿದೆ ಇವೆಲ್ಲವನ್ನೂ ಪರಮಾತ್ಮನು ಶರೀರವನ್ನಾಗಿ ಹೊಂದಿರುವನು ಶರೀರವನ್ನು ಬೋಧಿಸತಕ್ಕ ಶಬ್ದಗಳೆಲ್ಲಾ ಶರೀರಿಯನ್ನು ಬೋಧಿಸುವುದರಿಂದ ಇವೆಲ್ಲವೂ ಪರಮಾತ್ಮನೂ ಒಂದೇ ಎಂದು ಬ್ರಹ್ಮಜ್ಞಾನಿಯು ತಿಳಿಯುತ್ತಾನೆ ಅಂಥಾ ಬ್ರಹ್ಮಜ್ಞಾನಿಯು ಪರಮಾತ್ಮನನ್ನು ಸ್ವತಂತ್ರನನ್ನಾಗಿಯೂ ತನ್ನನ್ನು ಪರತಂತ್ರನನ್ನಾಗಿಯೂ ಧ್ಯಾನಕಾಲದಲ್ಲಿ ತಿಳಿಯುವುದರಿಂದ, ಅವನಿಗೆ ತಾನು ಸ್ವತಂತ್ರನೆಂಬ ಮೋಹವು ಇರುವುದಿಲ್ಲ ಎಲ್ಲವೂ ಪರಮಾತ್ಮನ ಸ್ವತ್ತು ಎಂದು ತಿಳಿಯುವುದರಿಂದ ಇವೆಲ್ಲವೂ, "ನನ್ನದು" ಎಂಬ ಮಮತೆಯೂ ಇರುವುದಿಲ್ಲ

**ಸ ಪರ್ಯಗಾಚ್ಛುಕ್ರಮಕಾಯಮವ್ರಣಮ ಸ್ನಾವಿರಂ ಶುದ್ಧ ಮಪಾಪವಿದ್ಧಂ । ಕವಿರ್ಮನೀಷೀ ಪರಿಭೂಃ ಸ್ವಯಂಭೂ ರ್ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಸ್ಸಮಾಭ್ಯಃ ॥೮॥**

ಸಃ—ಆ ಬ್ರಹ್ಮಜ್ಞಾನಿಯು, ಶುಕ್ರಂ — ಸ್ವಯಂಪ್ರಕಾಶವಾದ, ಅಕಾಯಂ—ಪ್ರಾಕೃತ ಶರೀರವಿಲ್ಲದ, ಅವ್ರಣಂ—ಗಾಯವಿಲ್ಲದಿರುವ, ಅಸ್ನಾವಿರಂ-ನಾಡಿಗಳಿಲ್ಲದಿರುವ, ಶುದ್ಧಂ-ಅಜ್ಞಾನವಿಲ್ಲದಿರುವ, ಅಪಾಪ ವಿದ್ಧಂ — ಪುಣ್ಯಪಾಪಗಳ ಸಂಬಂಧವಿಲ್ಲದಿರುವ, ಪರಮಾತ್ಮನನ್ನು, ಪರ್ಯಗಾತ್ — ಹೊಂದಬೇಕು ಕವಿಃ — ಪರಮಾತ್ಮಸ್ವರೂಪವನ್ನು ತಿಳಿಸತಕ್ಕ ಗ್ರಂಥವನ್ನು ರಚಿಸತಕ್ಕ, ಮನೀಷೀ—ಭಗವಂತನ ಸೌಂದರ್ಯ ವನ್ನು ಸ್ಮರಿಸುತ್ತಾ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ, ಪರಿಭೂಃ—ಕಾಮಕ್ರೋಧಗಳನ್ನು ಜಯಸಿರತಕ್ಕ, ಸ್ವಯಂಭೂಃ—ನಿರತಿ ಶಯ ಸುಖರೂಪನಾದ ತನ್ನ ಆತ್ಮನನ್ನು ಕಂಡ ಬ್ರಹ್ಮಜ್ಞಾನಿಯು, ಅರ್ಥಾನ್—ಪದಾರ್ಥಗಳನ್ನು, ಯಾಥಾತಥ್ಯತಃ—ವಿವೇಚನೆ ಮಾಡಿ, ಶಾಶ್ವತೀಭ್ಯಃ ಸಮಾಭ್ಯಃ—ಅನೇಕ ವರ್ಷಗಳು, ವ್ಯದಧಾತ್—ಮನಸ್ಸಿ ನಲ್ಲಿ ಅನುಸಂಧಾನ ಮಾಡಬೇಕು

## ತಾತ್ಪರ್ಯ

"ಎಲ್ಲಾ ವಸ್ತುಗಳಿಗೂ ಪರಮಾತ್ಮನು, ಅಂತರಾತ್ಮನು" ಎಂದು ತಿಳಿದಿರತಕ್ಕ ಬ್ರಹ್ಮಜ್ಞಾನಿಯು, ಪ್ರಾಕೃತ ಶರೀರವಿಲ್ಲದೇ, ಆ ಶರೀರ ಸಂಬಂಧ ಮೂಲಕನಾದ ರೋಗಗಳಿಲ್ಲದೇ, ಪುಣ್ಯಪಾಪ ಸಂಬಂಧವಿಲ್ಲದೇ ಸ್ವಯಂಪ್ರಕಾಶನಾಗಿರುವ, ಆ ಪರಮಾತ್ಮನನ್ನು ಅಪ್ರಾಕೃತದೇಶದಲ್ಲಿ ಹೊಂದಬೇಕು ಅದುವರೆಗೂ ಆ ಪರಮಾತ್ಮನ ಸ್ವರೂಪವನ್ನು ತಿಳಿಸ ತಕ್ಕ ಗ್ರಂಥವನ್ನು ರಚಿಸುತ್ತಾ, ಪರಮಾತ್ಮನ ಸೌಂದರ್ಯಾದಿ ಗುಣ ಗಳನ್ನು ಸ್ಮರಿಸುತ್ತಾ ಮನಸ್ಸನ್ನು ಇತರ ವಿಷಯಗಳ ಕಡೆಗೆ ಬಿಡದಂತ ಮಾಡಿ, ಕಾಮಕ್ರೋಧಗಳನ್ನು ಜಯಿಸಿ, "ಓಂ"ಕಾರದಲ್ಲಿ ತಿಳಿಸುವ

ಜೀವಾತ್ಮನು "ಪರಮಾತ್ಮನಿಗೇ ಶೇಷನು" ಎಂಬ ಅರ್ಥವನ್ನು ವಿವೇಚನೆ ಮಾಡಿ ನೆನೆಯುತ್ತಾ ಇರಬೇಕು

**ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋಭೂಯ ಇವ ತೇ ತಮೋಽಯ ಉ ವಿದ್ಯಾಯಾಂ ರತಾಃ ॥೯॥**

ಯೇ — ಭೋಗದಲ್ಲಿಯೂ, ಐಶ್ವರ್ಯದಲ್ಲಿಯೂ, ಆಸಕ್ತರಾದ ಯಾವ ಮನುಷ್ಯರು, ಅವಿದ್ಯಾಂ—ವಿದ್ಯೆಗಿಂತ ಬೇರೆಯಾದ, ಆತ್ಮ ಪರಮಾತ್ಮಜ್ಞಾನವಿಲ್ಲದ ಕರ್ಮವನ್ನು, ಉಪಾಸತೇ—ಮನಸ್ಸಿಟ್ಟು ಆಚರಿಸುತ್ತಾರೆಯೋ, ತೇ—ಅವರು, ಅಂಧಂತಮಃ ಪ್ರವಿಶಂತಿ — ಬಹಳ ಅಜ್ಞಾನವನ್ನು ಪಡೆಯುತ್ತಾರೆ ಯೇ—ಯಾವ ಮನುಷ್ಯರು, ವಿದ್ಯಾಯಾಂ ಉ ರತಾ — ಜ್ಞಾನಮಾತ್ರದಲ್ಲಿಯೇ ಆಸಕ್ತರಾಗಿರುವರೋ, ತೇ — ಅವರು, ತತಃ ಭೂಯ ಇವ —ಅದಕ್ಕಿಂತ ಹೆಚ್ಚಾದ, ತಮಃ—ಅಜ್ಞಾನವನ್ನು ಪ್ರವಿಶಂತಿ—ಪಡೆಯುತ್ತಾರೆ

೯ನೇ ಮಂತ್ರದಿಂದ ೧೪ನೇ ಮಂತ್ರದವರಿಗೆ ಬ್ರಹ್ಮಜ್ಞಾನಿಯು, ಜ್ಞಾನಾಭ್ಯಾಸ, ಕರ್ಮಾಭ್ಯಾಸ, ಯೋಗಾಭ್ಯಾಸ ಅಮಾನಿತ್ವಾದಿ ಗುಣಸಂಪಾದನೆ ಇವುಗಳೆಲ್ಲವನ್ನೂ ಮಾಡಬೇಕೆಂದು ತಿಳಿಯಪಡಿಸುವುದು

ಈ ಜೀವಾತ್ಮನು, ಶರೀರ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ ಇವುಗಳಿಗಿಂತ ಬೇರೆಯಾದವನು, ಸ್ವತಂತ್ರನಲ್ಲ ಪರಮಾತ್ಮನ ಅಧೀನನಾದವನು, ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಕರ್ಮಗಳೂ ಅವುಗಳ ಫಲವೂ ಆ ಪರಮಾತ್ಮನಿಗೆ ಸೇರಿದುದು ಈ ಫಲವನ್ನು ತಾನು ಅನುಭವಿಸುವುದಕ್ಕಾಗಿ ತನ್ನವನಾದ ಜೀವಾತ್ಮನಿಂದ ಪರಮಾತ್ಮನು ಕರ್ಮವನ್ನು ಮಾಡಿಸುತ್ತಾನೆ ಆದುದರಿಂದ ಪರಮಾತ್ಮನೇ ಸ್ವತಂತ್ರಕರ್ತನು ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲ ಎಂಬ ಆತ್ಮನ ನಿಜಜ್ಞಾನವನ್ನು ಪಡೆಯದೇ, ಈ

ಕರ್ಮವೂ ಇದರ ಫಲವೂ ನನಗೆ ಸೇರಿದುದು, ನಾನು ಸ್ವತಂತ್ರ ಕರ್ತೃನು ಎಂದು ತಿಳಿದು, ಸ್ವಂತ ಭೋಗದಲ್ಲಿ ಆಸೆಯಿಂದ ಕೇವಲ ಕರ್ಮವನ್ನು ಮಾಡತಕ್ಕ ಜನರಿಗೆ ಮತ್ತಷ್ಟು ಅಜ್ಞಾನವು ಹೆಚ್ಚಾಗುವುದು. ಭಗವಂತನ ಆರಾಧನರೂಪವಾದ ಕರ್ಮವನ್ನು ಬಿಟ್ಟು, ಧ್ಯಾನ ಒಂದರಲ್ಲಿಯೇ ನಿರತರಾಗುವವರಿಗೆ, ಹಿಂದೆ ಹೇಳಿರುವ ರೀತಿಯಲ್ಲಿ ಆತ್ಮಜ್ಞಾನವಿಲ್ಲದೇ ಕರ್ಮಮಾಡುವವರಿಗಿಂತ ಹೆಚ್ಚಾಗಿ ಅಜ್ಞಾನವುಂಟಾಗುವುದು

**ಅನ್ಯದೇವಾಹುರ್ವಿದ್ಯಯಾನ್ಯದಾಹುರವಿದ್ಯಯಾ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥೧೦॥**

ವಿದ್ಯಯಾ—ಕರ್ಮಾಚರಣೆಯಿಲ್ಲದ ಬರಿಯ ಜ್ಞಾನಕ್ಕಿಂತ, ಅನ್ಯತ್ ಏವ ಆಹುಃ—(ಮೋಕ್ಷ ಸಾಧನವು) ಬೇರೆಯಾದದ್ದೆಂದು ಹೇಳುತ್ತಾರೆ ಅವಿದ್ಯಯಾ— ಆತ್ಮಜ್ಞಾನವಿಲ್ಲದ ಬರಿಯ ಕರ್ಮಕ್ಕಿಂತ, ಅನ್ಯತ್ ಆಹುಃ—(ಮೋಕ್ಷಸಾಧನವು) ಬೇರೆ ಎಂದು ಹೇಳುತ್ತಾರೆ ಯೇ—ಯಾವ ಪೂರ್ವಾಚಾರ್ಯರು, ನಃ—ನಮಗೆ, ತತ್ ವಿಚಚಕ್ಷಿರೇ— ಆ ಮೋಕ್ಷ ಸಾಧನವನ್ನು ವಿಶದವಾಗಿ ಉಪದೇಶಿಸಿದರೋ, ಧೀರಣಾಂ—ಬುದ್ಧಿವಂತರಾದ ಅವರ ದೆಸೆಯಿಂದ, ಇತಿ ಶುಶ್ರುಮ— ಈ ರೀತಿಯಾಗಿ ಕೇಳಿದ್ದೇವೆ

## ತಾತ್ಪರ್ಯ

ಮೋಕ್ಷಕ್ಕೆ ಸಾಧನವಾದುದು ಜ್ಞಾನವಿಲ್ಲದ ಕರ್ಮವೂ ಅಲ್ಲ, ಕರ್ಮವಿಲ್ಲದ ಜ್ಞಾನವೂ ಅಲ್ಲ, ಅವುಗಳಿಗಿಂತ ಬೇರೆಯಾದ ಕರ್ಮದಿಂದ ಕೂಡಿದ ಜ್ಞಾನವು, ಎಂದು ಉಪದೇಶ ಮಾಡಿರುವರು

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ**
**ವಿದ್ಯಯಾಽಮೃತಮಶ್ನುತೇ ॥೧೧॥**

ಯಃ–ಮೇಲೆ ಹೇಳಿರುವಂತೆವಿದ್ಯೆಯು ಉಪದೇಶವಡೆದ ಯಾವನು, ವಿದ್ಯಾಂಚ—ಬ್ರಹ್ಮಧ್ಯಾನವನ್ನೂ, ಅವಿದ್ಯಾಂ ಚ—ಅದಕ್ಕೆ ಅಂಗವಾದ ಕರ್ಮವನ್ನೂ, ತತ್ ಉಭಯಂ—ಆ ಜ್ಞಾನಕರ್ಮಗಳೆರಡನ್ನೂ, ಸಹ ವೇದ— ಒಟ್ಟಿಗೆ ತಿಳಿಯುತ್ತಾನೆಯೋ, ಅವಿದ್ಯಯಾ—ವಿದ್ಯೆಗಿಂತ ಬೇರೆಯಾದ ಕರ್ಮದಿಂದ, ಮೃತ್ಯುಂ ತೀರ್ತ್ವಾ—ಧ್ಯಾನ ಉಂಟಾಗುವುದಕ್ಕೆ ಅಡ್ಡಿಮಾಡುವ ಪಾಪವನ್ನು ಹೋಗಲಾಡಿಸಿಕೊಂಡು, ವಿದ್ಯಯಾ—ಧ್ಯಾನದಿಂದ, ಅಮೃತಂ ಅಶ್ನುತೇ—ಪರಮಾತ್ಮನನ್ನು ಹೊಂದುವನು

## ತಾತ್ಪರ್ಯ

ಮೇಲೆ ಹೇಳಿರುವಂತೆ ಆಚರಿಸಲ್ಪಡತಕ್ಕ ಕರ್ಮವು, ಪ್ರೀತಿ ಪೂರ್ವಕವಾದ ಭಗವಂತನ ಧ್ಯಾನವೆಂಬ ಭಕ್ತಿಯನ್ನು ಆರಂಭಿಸುವುದಕ್ಕೆ ಅಡ್ಡಿಮಾಡತಕ್ಕ ಪಾಪಗಳನ್ನು ಹೋಗಲಾಡಿಸುವುದು ಧ್ಯಾನವೆಂಬ ಭಗವದ್ಭಕ್ತಿಯು, ಭಗವಂತನ ಪ್ರಾಪ್ತಿ ಎಂಬ ಮೋಕ್ಷವನ್ನುಂಟುಮಾಡುವುದು ಕರ್ಮವು ಭಕ್ತಿಯನ್ನು ಹುಟ್ಟಿಸುವುದಕ್ಕೂ, ಹುಟ್ಟಿದ ಭಕ್ತಿಯನ್ನು ವೃದ್ಧಿಪಡಿಸುವುದಕ್ಕೂ ಕಾರಣವಾಗಿರುವುದರಿಂದ ಭಕ್ತಿಗೆ ಕರ್ಮವು ಅಂಗವೆಂದು ತಿಳಿದು, ಕರ್ಮವನ್ನೂ ಭಕ್ತಿಯನ್ನೂ ಒಟ್ಟಿಗೆ ಆಚರಿಸಬೇಕು.

**ಅಂಧಂ ತಮಃ ಪವಿಶ್ರಂತಿ ಯೇಽಸಂಭೂತಿ ಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ**
**ಸಂಭೂತ್ಯಾಂ ರತಾಃ ॥೧೨॥**

ಯೇ—ಯಾವ ಮನುಷ್ಯರು, ಅಸಂಭೂತಿಂ – ಯೋಗಾಭ್ಯಾಸಕ್ಕೆ ಪ್ರತಿಬಂಧಕವಾದ ಅಹಂಕಾರ, ಹಿಂಸೆ ಇವುಗಳನ್ನು ಬಿಡುವುದನ್ನೇ, ಉಪಾಸತೇ—ಅಭ್ಯಾಸಮಾಡುತ್ತಾರೆಯೋ, ತೇ—ಅವರು, ಅಂಧಂ ತಮಃ ಪ್ರವಿಶಂತಿ—ಅಜ್ಞಾನವನ್ನು ಹೊಂದುವರು ಯೇ ಸಂಭೂತ್ಯಾಂ ಉ ರತಾಃ—ಯಾರು ಸಮಾಧಿಯಲ್ಲಿಯೇ ಆಸಕ್ತರಾಗಿರುವರೋ, ತೇ—ಅವರು, ಅವರು, ತತಃ ಭೂಯ ಇವ ತಮಃ—ಅದಕ್ಕಿಂತ ಹೆಚ್ಚಾದ ಅಜ್ಞಾನವನ್ನು, ಪ್ರವಿಶಂತಿ—ಹೊಂದುತ್ತಾರ

ಯೋಗಾಭ್ಯಾಸದ ಸಮಾಧಿ ಇಲ್ಲದೇ ಅಹಂಕಾರ, ಹಿಂಸೆ, ಮೊದಲಾದುವನ್ನು ಬಿಡತಕ್ಕ ಅಭ್ಯಾಸವನ್ನೇ ಮಾಡತಕ್ಕವರಿಗೆ ಅಜ್ಞಾನವು ಉಂಟಾಗುವುದು ಅಹಂಕಾರಾದಿಗಳನ್ನು ಬಿಡದೇ ಬರಿಯ ಸಮಾಧಿಯನ್ನು ಅಭ್ಯಾಸಮಾಡತಕ್ಕವರಿಗೆ ಇನ್ನೂ ಅಧಿಕವಾದ ಅಜ್ಞಾನವುಂಟಾಗುವುದು. ಆದುದರಿಂದ ನಿಷಿದ್ಧಗಳಾದ ಅಹಂಕಾರ, ಹಿಂಸೆ ಇವುಗಳನ್ನು ಬಿಡುವುದೂ, ಸಮಾಧಿಯೂ ಇವೆರಡೂ ಮುಮುಕ್ಷುವಿಗೆ ಅವಶ್ಯಕಗಳು

**ಅನ್ಯದೇವಾಹುಸ್ಸಂಭವಾದನ್ಯದಾಹುರಸಂಭವಾತ್ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ವಿಚಚಕ್ಷಿರೇ ॥೧೩॥**

ಸಂಭವಾತ್ — ಕೇವಲ ಸಮಾಧಿಗಿಂತ, ಅನ್ಯತ್ ಏವ ಆಹುಃ — [ಮೋಕ್ಷ ಸಾಧನವು] ಬೇರೆ ಆದುದೆನ್ನುವರು ಅಸಂಭವಾತ್—ಕೇವಲ ಅಹಂಕಾರಾದಿಗಳ ನಿವೃತ್ತಿಗಿಂತ, ಅನ್ಯತ್ ಆಹುಃ—[ಮೋಕ್ಷ ಸಾಧನವು] ಬೇರೆ ಎನ್ನುವರು ಯೇ ನಃ ತತ್ ವಿಚಚಕ್ಷಿರೇ—ಯಾವ ಆಚಾರ್ಯರು ನಮಗೆ ಆ ಮೋಕ್ಷ ಸಾಧನವನ್ನು ಹೇಳಿದರೋ [ಅಂಥಾ], ಧೀರಾಣಾಂ—ವಿದ್ವಾಂಸರ ದೆಸೆಯಿಂದ, ಇತಿ ಶುಶ್ರುಮ—ಈ ರೀತಿಯಾಗಿ ಕೇಳಿದ್ದೇವೆ

### ತಾತ್ಪರ್ಯ

ಮೋಕ್ಷಕ್ಕೆ ಸಾಧನವಾದುದು ಬರಿಯ ಅಹಂಕಾರಾದಿಗಳ ನಿವೃತ್ತಿಯೂ ಅಲ್ಲ, ಅಹಂಕಾರಾದಿ ನಿವೃತ್ತಿ ಇಲ್ಲದ ಬರಿಯ ಸಮಾಧಿಯೂ ಅಲ್ಲ ನಿಷಿದ್ಧ ನಿವೃತ್ತಿಯಿಂದ ಕೂಡಿದ ಸಮಾಧಿಯೇ ಮೋಕ್ಷಕ್ಕೆ ಸಾಧನವು ಎಂದು ವಿದ್ವಾಂಸರಾದ ನಮ್ಮ ಗುರುಗಳು ಉಪದೇಶಿಸಿರುವರು

**ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಂ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ ॥೧೪॥**

ಸಂಭೂತಿಂ ಚ — ಸಮಾಧಿ ಎಂಬ ಬ್ರಹ್ಮಾನುಭವವನ್ನೂ, ವಿನಾಶಂ ಚ— ಯೋಗವಿರೋಧಿಗಳಾದ ಅಹಂಕಾರಾದಿ ವರ್ಜನವನ್ನೂ, ತತ್ ಉಭಯಂ ಸಹ—ಅವೆರಡನ್ನು ಒಟ್ಟಿಗೆ, ಯಃ ವೇದ—ಯಾವನು ಆಚರಿಸಲು ತಿಳಿಯುತ್ತಾನೆಯೋ, [ಸಃ]-ಅವನು, ವಿನಾಶೇನ-ವಿರೋಧಿ ನಿವೃತ್ತಿಯಿಂದ, ಮೃತ್ಯುಂ ತೀರ್ತ್ವಾ-ಸಮಾಧಿ ವಿರೋಧಿ ಪಾಪಗಳನ್ನು ಹೋಗಲಾಡಿಸಿಕೊಂಡು, ಸಂಭೂತ್ಯಾ—ಸಮಾಧಿಯ ಅಭ್ಯಾಸದಿಂದ, ಅಮೃತಂ ಅಶ್ನುತೇ—ಪರಮಾತ್ಮನನ್ನು ಅನುಭವಿಸುತ್ತಾನೆ

## ತಾತ್ಪರ್ಯ

ಅಹಂಕಾರಾದಿಗಳನ್ನು ಬಿಡುವುದು ಸಮಾಧಿಗೆ ಅಂಗವೆಂದೂ, ಸಮಾಧಿಯು ಅಂಗೀ ಎಂದೂ ತಿಳಿದು, ಎರಡನ್ನೂ ಆಚರಿಸತಕ್ಕ ಪುರುಷನಿಗೆ, ಅಹಂಕಾರಾದಿ ನಿವೃತ್ತಿಯಿಂದ ಸಮಾಧಿಗೆ ವಿರೋಧಿಗಳಾದ ಪಾಪಗಳು ಹೋಗಿ, ಸಮಾಧಿಯಿಂದ ಪರಮಾತ್ಮನ ಅನುಭವವುಂಟಾಗು ವುದು

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್**
**ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ**
**ದೃಷ್ಟಯೇ ||೧೫||**

ಹಿರಣ್ಮಯೇನ—ಚಿನ್ನಕ್ಕೆ ಸದೃಶವಾದ, ಪಾತ್ರೇಣ— ಪರಮಾತ್ಮ ನಲ್ಲಿ ಪ್ರಸರಿಸುವ ವ್ಯಾಪಾರವನ್ನು ಅಡ್ಡಿಮಾಡತಕ್ಕ ಪಾತ್ರೆಯಂತಿರುವ ರಾಜಸ ವಸ್ತುವಿನಿಂದ, ಸತ್ಯಸ್ಯ—ಸ್ವರೂಪ ವಿಕಾರವಿಲ್ಲದೇ ಇರುವ ಜೀವಾತ್ಮನ, ಮುಖಂ—ಇಂದ್ರಿಯಗಳಿಗೆ ಮುಖದಂತಿರುವ ಮನಸ್ಸು, ಅಪಿಹಿತಂ—ಮರೆಮಾಡಲ್ಪಟ್ಟಿದೆ. ಪೂಷ—ಎಲೈ ಸೂರ್ಯನಿಗೆ ಅಂತ ರ್ಯಾಮಿಯಾದ ಪರಮಾತ್ಮನೇ, ತ್ವಂ—ನೀನು, ಸತ್ಯ ಧರ್ಮಾಯ— ಜೀವನಿಗೆ ಧರ್ಮವಾದ, ದೃಷ್ಟಯೇ—ಪರಮಾತ್ಮ ದರ್ಶನಕ್ಕೋಸ್ಕರ, ತತ್ ಅಪಾವೃಣು—ಆ ಮನಸ್ಸಿನ ಮರೆಯನ್ನು ತಪ್ಪಿಸು

## ತಾತ್ಪರ್ಯ

೧೫ನೇ ಮಂತ್ರದಿಂದ ೧೮ರ ವರೆಗೆ ಭಕ್ತಿ ಪ್ರಪತ್ತಿ ವಿವರಣೆಯು.

ಜೀವಾತ್ಮದ ಇಂದ್ರಿಯಗಳಲ್ಲಿ ಮುಖ್ಯವಾದ ಮನಸ್ಸಿನ ವ್ಯಾಪಾರವು ಪರಮಾತ್ಮನ ವಿಷಯದಲ್ಲಿ ಹರಡುವುದಕ್ಕೆ ರಜೋಗುಣವು ಚಿನ್ನದಂತೆ ಹೊಳೆದು ಅಡ್ಡಿ ಮಾಡುತ್ತಿರುವುದು ಆಶ್ರಿತರನ್ನು ಪೋಷಿಸುವ ಸ್ವಭಾವ ವುಳ್ಳ ಸೂರ್ಯಾಂತರ್ಯಾಮಿಯಾದ ಪರಮಾತ್ಮನೇ ಇಂದ್ರಿಯಗಳಿಗೆ ನಿಯಾ ಮಕನಾದ ನೀನು, ಆ ರೀತಿಯಾದ ಅಡ್ಡಿಯನ್ನು ಹೋಗಲಾಡಿಸಿ, ನಿನ್ನ ದರ್ಶನವುಂಟಾಗುವಂತೆ ಮಾಡು

### ಭಕ್ತಿಯೋಗ ನಿಷ್ಠನ ಅನುಸಂಧಾನ ಮಂತ್ರವು

**ಪೂಷನ್ನೇಕರ್ಷೇ ಯಮ ಸೂರ್ಯ**
**ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ।**
**ತೇಜೋಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ**
**ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥೧೬॥**

ಪೂಷನ್-ಆಶ್ರಿತರನ್ನು ಪೋಷಿಸುವವನೇ, ಏಕರ್ಷೇ-ಅದ್ವಿತೀಯ ನಾಗಿ ಇಂದ್ರಿಯಾರ್ಥಗಳನ್ನು ನೋಡತಕ್ಕವನೇ, ಯಮ — ಎಲ್ಲರ ಒಳಗೂ ಇದ್ದು ನಿಯಮನ ಮಾಡತಕ್ಕವನೇ, ಸೂರ್ಯ—ಭಕ್ತರ ಬುದ್ಧಿ ಯನ್ನು ಚೆನ್ನಾಗಿ ಪ್ರೇರಿಸತಕ್ಕವನೇ, ಪ್ರಾಜಾಪತ್ಯ—ಗರ್ಭದ ಒಳಗೆ ಸಂಚರಿಸತಕ್ಕ ವೈಶ್ವಾನರವೆಂಬ ವಿಷ್ಣುವೇ, ರಶ್ಮೀನ್—ನಿನ್ನ ದಿವ್ಯರೂಪ ದರ್ಶನಕ್ಕೆ ಉಪಯೋಗವಡದ ಉಗ್ರಕಿರಣಗಳನ್ನು, ವ್ಯೂಹ—ಹೋಗ ಲಾಡಿಸು ತೇಜಃ—ನಿನ್ನ ದರ್ಶನಕ್ಕೆ ಉಪಯೋಗಪಡುವ ಸೌಮ್ಯಕಿರಣ ಗಳನ್ನು, ಸಮೂಹ -- ಒಟ್ಟಿಗೆ ಸೇರಿಸು. ಯತ್ — ಪ್ರಸಿದ್ಧವಾದ, ತೇ—ನಿನ್ನ, ಕಲ್ಯಾಣತಮಂ — ಶುಭಾಶ್ರಯವಾದ, ರೂಪಂ— ದಿವ್ಯ ಮಂಗಳ ವಿಗ್ರಹವುಂಟೋ, ತೇ ತತ್—ಆ ನಿನ್ನ ದಿವ್ಯರೂಪವನ್ನು, ಪಶ್ಯಾಮಿ—ನೋಡಬೇಕು ಯಃ ಅಸೌ ಪುರುಷಃ— ಯಾವ ಈ ಮಹಾ

ಪುರುಷನಾದ ಶ್ರೀಮನ್ನಾರಾಯಣನುಂಟೋ, ಸಃ ಅಹಂ ಅಸ್ಮಿ—ನಾನು ಅವನನ್ನೇ ಅಂತರಾತ್ಮನನ್ನಾಗುಳ್ಳವನ್ನಾಗಿದ್ದೇನೆ

## ತಾತ್ಪರ್ಯ

ಭಕ್ತಿಯೋಗ ನಿಷ್ಠನು ಹೀಗೆ ನೆನೆಯಬೇಕು

"ಪರಮಾತ್ಮನೇ! ನಿನ್ನ ದಿವ್ಯರೂಪದರ್ಶನಕ್ಕೆ ಉಪಯೋಗಪಡದ ಕಿರಣಗಳನ್ನು ಹೋಗಲಾಡಿಸಿ, ನಿನ್ನ ದರ್ಶನಕ್ಕೆ ಉಪಯುಕ್ತವಾದ ತೇಜಸ್ಸನ್ನು ಒಟ್ಟಿಗೆ ಸೇರಿಸು ನಿನ್ನ ಶುಭಾಶ್ರಯವಾದ ದಿವ್ಯಮಂಗಳ ವಿಗ್ರಹವನ್ನು ನೋಡಲು ಅಪೇಕ್ಷಿಸುತ್ತೇನೆ"

ಪುರುಷಸೂಕ್ತದಲ್ಲಿ ಹೇಳಲ್ಪಡುವ ಮಹಾಪುರುಷನಾದ ಶ್ರೀಮನ್ನಾರಾಯಣನೇ ನನಗೆ ಅಂತರಾತ್ಮನಾಗಿದ್ದಾನೆ, ಎಂದು ಅವನ ದರ್ಶನವನ್ನು ಭಕ್ತನು ಪ್ರಾರ್ಥಿಸುವ ಮಂತ್ರವು

## ಶರಣಾಗತಿ ಮಂತ್ರ

**ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಮ್ |**
**ಓಂ ಕ್ರತೋಸ್ಮರ ಕೃತಂಸ್ಮರ ಕ್ರತೋಸ್ಮರ ಕೃತಂಸ್ಮರ ||೧೭||**

ವಾಯುಃ — ಕರ್ಮಕ್ಕೆ ಅನುಸಾರವಾಗಿ ಅನೇಕ ಲೋಕಗಳಿಗೆ ಹೋಗತಕ್ಕವನು, ಅನಿಲಂ—ಒಂದೇಕಡೇ ಎಲ್ಲಿಯೂ ನಿಲ್ಲತಕ್ಕ ಸ್ವಭಾವವಿಲ್ಲದವನೂ, ಅಮೃತಂ—ದೇಹ ನಾಶವಾದರೂ ತಾನು ನಾಶವಾಗದವನು (ಜೀವಾತ್ಮನು), ಅಥ ಇದಂ ಶರೀರಂ—ಇವನಿಗಿಂತ ಬೇರೆಯಾದ ಈ ಶರೀರವು, ಭಸ್ಮಾಂತಂ-ಸುಟ್ಟರೆ ಬೂದಿಯಾಗತಕ್ಕದ್ದು, ಓಂಕ್ರತೋ-ಓಂಕಾರದಿಂದ ಬೋಧಿಸಲ್ಪಡತಕ್ಕ ಯಜ್ಞಶರೀರಕ ಪರಮಾತ್ಮನೇ, ಸ್ಮರ — ಅನುಗ್ರಹಮಾಡುವ ಬುದ್ಧಿಯಿಂದ ನನ್ನನ್ನು ಸ್ಮರಿಸು ಕೃತಂಸ್ಮರ—ನನ್ನಿಂದ ಮಾಡಲ್ಪಟ್ಟ ಸ್ವಲ್ಪ ಅನುಕೂಲ್ಯವನ್ನು ಸ್ಮರಿಸು

ಕ್ರತೋಸ್ಮರ ಕೃತಂಸ್ಮರ—ಭಕ್ತಿಗೋಚರನಾದ ಪರಮಾತ್ಮನೇ ನನ್ನನ್ನು ಸ್ಮರಿಸು, ನನ್ನಿಂದ ಮಾಡಲ್ಪಟ್ಟ ಸ್ವಲ್ಪಾನುಕೂಲ್ಯವನ್ನು ಸ್ಮರಿಸು

## ತಾತ್ಪರ್ಯ

ಈ ನಮ್ಮ ಶರೀರವು ನಾಶವಾಗತಕ್ಕದ್ದು, ಶರೀರಕ್ಕಿಂತ ಬೇರೆಯಾದ ಜೀವಾತ್ಮನು ತಾನು ಮಾಡಿದ ಕರ್ಮ ಫಲವನ್ನು ಅನುಭವಿಸುವುದಕ್ಕಾಗಿ ಅನೇಕ ಲೋಕಗಳಿಗೆ ಹೋಗತಕ್ಕ ಚಂಚಲ ಸ್ವಭಾವವುಳ್ಳವನು ಮತ್ತು ನಿತ್ಯವಾಗಿರತಕ್ಕವನು ಈ ಜೀವಾತ್ಮನು ಪರಮಾತ್ಮನ ಶೇಷನು ಎಂದು 'ಓಂ'ಕಾರದಿಂದ ಪರಮಾತ್ಮನಲ್ಲಿ ಆತ್ಮನನ್ನು ಸಮರ್ಪಣೆ ಮಾಡಿ, "ಭಕ್ತಿಗೆ ಗೋಚರನಾಗತಕ್ಕ ಪರಮಾತ್ಮನೇ! ನಮ್ಮಲ್ಲಿರುವ ಅಜ್ಞಾತ ಸುಕೃತಗಳನ್ನು ನಮ್ಮ ವಿಷಯದಲ್ಲಿ ಅನುಗ್ರಹಮಾಡುವ ಬುದ್ಧಿಯಿಂದ ಸ್ಮರಿಸು" ಎಂದು ತ್ವರೆಯಿಂದ ಎರಡಾವರ್ತಿ ಈ ಮಂತ್ರವು ತಿಳಿಸುವುದು ಸುಕೃತವೆಂದು ಹೆಸರಿಡುವುದಕ್ಕಾಗದೆ ಇರುವ ಯಾದೃಚ್ಛಿಕ, ಪ್ರಾಸಂಗಿಕವಾದ ಅನೇಕ ಜನ್ಮಗಳಲ್ಲಿ ಚೇತನರು ಮಾಡಿರುವ ಸುಕೃತಗಳನ್ನು ಲೆಕ್ಕಮಾಡಿ, ಹುಟ್ಟುವ ಕಾಲದಲ್ಲಿ ನನ್ನನ್ನು ಕಟಾಕ್ಷಿಸಬೇಕೆಂದು ಪ್ರಾರ್ಥಿಸುವುದು ದೇಹವು ನಶ್ವರವಾದುದರಿಂದ ಮೋಕ್ಷೋಪಾಯದಲ್ಲಿ ತ್ವರೆಮಾಡಬೇಕೆಂಬುದನ್ನೂ ಈ ಮಂತ್ರವು ತಿಳಿಸುವುದು

## ಶರಣಾಗತಿ ಮಂತ್ರ

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ**
**ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜು ಹುರಾಣಮೇನೋ ಭೂಯಿಷ್ಠಾಂ**
**ತೇ ನಮ ಉಕ್ತಿಂ ವಿಧೇಮ ॥೧೮॥**

ಅಗ್ನೇ—ಅಗ್ನಿಯನ್ನು ಶರೀರವಾಗಿ ಉಳ್ಳ ಅಥವಾ ಮುಂದಕ್ಕೆ ನಡೆಸತಕ್ಕ ಸ್ವಭಾವವುಳ್ಳ ಪರಮಾತ್ಮನೇ, ರಾಯೇ—ವಿದ್ಯೆಯನ್ನು ಸಂಪಾದಿಸತಕ್ಕ ರಕ್ಷಣೆ ಮತ್ತು ನಿನ್ನ ಪೂಜೆ ಇವುಗಳಿಗೆ ಅನುಕೂಲ

ದ್ರವ್ಯಕ್ಕಾಗಿ ಅಥವಾ (ಪರಬ್ರಹ್ಮನೆಂಬ ಧನಕ್ಕಾಗಿ), ಸುಪಥಾ—ನಿಷಿದ್ಧವಲ್ಲದ ಒಳ್ಳೆಯ ಮಾರ್ಗದಿಂದ ಅಥವಾ ಅರ್ಚಿರಾದಿ ಮಾರ್ಗದಿಂದ, ಅಸ್ಮಾನ್ ನಯ—ನಮ್ಮನ್ನು ಪ್ರವರ್ತಿಸುವಂತೆ ಮಾಡು [ಅನನ್ಯಪ್ರಯೋಜನರೂ ಅನನ್ಯಗತಿಕರೂ ಆದ ನಮ್ಮನ್ನೂ ನಮ್ಮ ಸಂಬಂಧಿಗಳನ್ನೂ ಹೊಂದಿಸು] ದೇವ—ಜಗತ್ಸೃಷ್ಟಿಸ್ಥಿತಿ ಸಂಹಾರ, ಒಳಗೆ ಪ್ರವೇಶ, ಆಶ್ರಿತರ ಬಂಧವಿಮೋಚನೆ ಇವೇ ಮೊದಲಾದ ಕ್ರೀಡೆಗಳಲ್ಲಿ ಆಸಕ್ತನಾದ ಪರಮಾತ್ಮನೇ, ವಿಶ್ವಾನಿ ವಯುನಾನಿ—ಆಯಾ ಅಧಿಕಾರಿಗಳಿಗೆ ತಕ್ಕ ಉಪಾಯಗಳನ್ನು, ವಿದ್ವಾನ್—ಸರಿಯಾಗಿ ತಿಳಿದುಕೊಂಡಿದ್ದೀಯೆ. ಜುಹುರಾಣಂ ಏನಃ-ನಿನ್ನನ್ನು ಹೊಂದಲು ಅಡ್ಡಿಮಾಡುವ ಪಾಪವನ್ನು, ಅಸ್ಮತ್ ಯುಯೋಧಿ—ನಮ್ಮ ದೆಸೆಯಿಂದ ಬೇರಮಾಡು, ನಾಶಮಾಡು ತೇ ಭೂಯಿಷ್ಠಾಂ—ನಿನ್ನ ಅಭಿಪ್ರಾಯದಂತೆ ಅತ್ಯಧಿಕವೆನಿಸಿಕೊಳ್ಳುವ, ನಮ ಉಕ್ತಿಂ—ನಮಃ ಎಂಬ ಶಬ್ದೋಚ್ಚಾರಣೆಯನ್ನು, ವಿಧೇಮ—ಮಾಡುತ್ತೇವೆ

## ತಾತ್ಪರ್ಯ

ನಮ್ಮನ್ನು ಮುಂದಕ್ಕೆ ನಡೆಸತಕ್ಕ ಅಗ್ನಿಶರೀರಕನಾದ, ಜಗತ್ಸೃಷ್ಟಿ ಮೊದಲಾದ ವಿಚಿತ್ರವಾದ ಲೀಲೆಗಳುಳ್ಳ, ಚೇತನರ ಇಷ್ಟಕ್ಕೆ ತಕ್ಕಂತೆ ಧರ್ಮಾರ್ಥಕಾಮಮೋಕ್ಷಗಳೆಂಬ ಫಲಗಳನ್ನು ಕೊಡುವುದಕ್ಕೆ ಉಪಾಯಗಳನ್ನು ಅರಿತಿರುವ ಪರಮಾತ್ಮನೇ! ನಿನ್ನನ್ನು ಹೊಂದುವುದಕ್ಕೆ ಅಡ್ಡಿಮಾಡತಕ್ಕ ಪಾಪಗಳನ್ನು ನೀನು ಹೋಗಲಾಡಿಸಿ, ನಿನ್ನ ಬಳಿಗೆ ನಮ್ಮನ್ನು ಅರ್ಚಿರಾದಿ ಮಾರ್ಗದಲ್ಲಿ ಕರೆದುಕೊಂಡು ಹೋಗು ಅನನ್ಯ ಪ್ರಯೋಜನರೂ ಅನನ್ಯಗತಿಕರೂ ಆದ ನಾವು ಪರಿಪೂರ್ಣ ಕಾಮನಾಗಿಯೂ ನಿರುಪಾಧಿಕ ಸ್ವಾಮಿಯಾಗಿಯೂ, ಇರುವ ನಿನಗೆ ಯಾವಾಗಲೂ ಸಂತೋಷದಿಂದ ಕೈಮುಗಿದುಕೊಂಡು ನಿನ್ನ ಅಭಿಪ್ರಾಯದಂತೆ ಅಧಿಕವೆನಿಸುವ "ನಮಃ" ಎಂಬ ಶಬ್ದವನ್ನು ಹೇಳುವೆವು.

ಯಂ ರಾಮರಾವ್, ವಾಣೀವಿಲಾಸ ಮುದ್ರಣಾಲಯ
ಸಿಟಿಮಾರ್ಕೆಟ್ — ಬೆಂಗಳೂರು